# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜುಲೈ ೯, ೨೦೧೫ (ಆಷಾಢ ೧೮, ಶಕ ವರ್ಷ ೧೯೩೭)<br>Bengaluru, Thursday, July 9, 2015 (Ashadha 18, Shaka Varsha 1937) | ಸಂಚಿಕೆ ೨೮<br>Issue 28 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಭಾಷಾಂತರ ನಿರ್ದೇಶನಾಲಯ**

**ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ನಡವಳಿಗಳು**

**ಪೋಡಿಯಂ ಬ್ಲಾಕ್, ನೆಲಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಡಾ॥ ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು–01.**

**ಸಂ: ಭಾನಿ 61/ಆಡಳಿತ/ 2010, ದಿನಾಂಕ: 21–05–2015**

**ವಿಷಯ:** ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ಮೇಲೆ ಶಿಸ್ತು ಪ್ರಕರಣದಲ್ಲಿ ದಂಡನೆ ವಿಧಿಸುವ ಕುರಿತಂತೆ ಅಂತಿಮ ಆದೇಶ.

**ಓದಲಾಗಿದೆ:**

1. ಉಪ ಪೊಲೀಸ್ ಅಧೀಕ್ಷಕರು, (ನಗರ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ದಿನಾಂಕ 9–9–2010.
2. ಈ ನಿರ್ದೇಶನಾಲಯದ ಪತ್ರ ಸಂಖ್ಯೆ ಭಾನಿ 13/ಜಿಪಿಎ/ಗೌಪ್ಯವಿ/2010 ದಿನಾಂಕ 24–09–2010.
3. ಈ ನಿರ್ದೇಶನಾಲಯದ ಪತ್ರ ಸಂಖ್ಯೆ ಭಾನಿ 13/ಜಿಪಿಎ/ಗೌಪ್ಯವಿ/2010 ದಿನಾಂಕ 24–09–2010.
4. ಆರಕ್ಷಕ ಉಪ ನಿರೀಕ್ಷಕರು, ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು–01 ಇವರ ಪ್ರಥಮ ವರ್ತಮಾನ ವರದಿ ದಿನಾಂಕ 24–09–2010.
5. ಈ ನಿರ್ದೇಶನಾಲಯದ ಪತ್ರ ಸಂಖ್ಯೆ ಭಾನಿ 13/ಜಿಪಿಎ/ಗೌಪ್ಯವಿ/2010 ದಿನಾಂಕ 25–09–2010.
6. ಆರಕ್ಷಕ ಉಪ ನಿರೀಕ್ಷಕರು, ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು–01 ಇವರ ಪತ್ರ ದಿನಾಂಕ 29–09–2010.
7. ಈ ನಿರ್ದೇಶನಾಲಯದ ಕಚೇರಿ ಆದೇಶ ಸಂಖ್ಯೆ ಭಾನಿ 61/ಆಡಳಿತ/2010 ದಿನಾಂಕ 06–10–2010.
8. ಈ ನಿರ್ದೇಶನಾಲಯದ ತಿಳುವಳಿಕೆ ಪತ್ರ ಸಂಖ್ಯೆ ಭಾನಿ 61/ಆಡಳಿತ/ 2010 ದಿನಾಂಕ 17–03–2011.
9. ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕರು, ಇವರ ಉತ್ತರ ದಿನಾಂಕ 20–04–2011.
10. ಈ ನಿರ್ದೇಶನಾಲಯದ ಪತ್ರ ಸಂಖ್ಯೆ ಭಾನಿ 61/ಆಡಳಿತ/ ಪ್ರೊಅಫೋ/2010 ದಿನಾಂಕ 24–03–2012.
11. ಈ ನಿರ್ದೇಶನಾಲಯದ ಕಚೇರಿ ಜ್ಞಾಪನ ಸಂಖ್ಯೆ ಭಾನಿ 61/ಆಡಳಿತ/ ಪ್ರೊಅಫೋ/2010 ದಿನಾಂಕ 18–04–2012.
12. ಶ್ರೀ ಹೆಚ್.ಆರ್. ಸುಧೀರ್, ವಿಚಾರಣಾಧಿಕಾರಿ ಇವರ ಪತ್ರ ದಿನಾಂಕ 21–12–2013.
13. ಈ ನಿರ್ದೇಶನಾಲಯದ ಪತ್ರ ಸಂಖ್ಯೆ ಭಾನಿ 61/ಆಡಳಿತ/2010 ದಿನಾಂಕ 31–12–2013.
14. ಇಲಾಖಾ ವಿಚಾರಣಾ ವರದಿ ದಿನಾಂಕ 10–02–2014.
15. ಈ ನಿರ್ದೇಶನಾಲಯದ ಕಾರಣ ಕೇಳುವ ನೋಟೀಸು ಸಂಖ್ಯೆ ಭಾನಿ 61/ ಆಡಳಿತ/ಪ್ರೊಅಫೋ/2010 ದಿನಾಂಕ 15–04–2014.
16. ಶ್ರೀಮತಿ ಜಿ. ಸೌಮ್ಯಶ್ರೀ ಇವರ ಉತ್ತರ ದಿನಾಂಕ 19–05–2014.
17. ಸರ್ಕಾರದ ಪತ್ರ ಸಂಖ್ಯೆ ಸಂವ್ಯಶಾಇ 26 ಭಾನಿವಿ 2014 ದಿನಾಂಕ 26–03–2015.
18. ಈ ನಿರ್ದೇಶನಾಲಯದ ಅಂತಿಮ ಕಾರಣ ಕೇಳುವ ನೋಟೀಸು ಸಂಖ್ಯೆ ಭಾನಿ 61/ಆಡಳಿತ/2010 ದಿನಾಂಕ 15–04–2015.
19. ಶ್ರೀಮತಿ ಜಿ. ಸೌಮ್ಯಶ್ರೀ ಇವರ ಉತ್ತರ ದಿನಾಂಕ 30–04–2015.

**ಪ್ರಸ್ತಾವನೆ:**

ಶ್ರೀಮತಿ ಜಿ. ಸೌಮ್ಯಶ್ರೀ,ಇವರು ಭಾಷಾಂತರ ನಿರ್ದೇಶನಾಲಯದಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ದಿನಾಂಕ 21-01-2008 ರಂದು ಸೇವೆಗೆ ಸೇರಿರುತ್ತಾರೆ. ಗಂಭೀರ ಆರೋಪಗಳ ಕಾರಣಕ್ಕಾಗಿ ಇವರ ಖಾಯಂಪೂರ್ವ ಸೇವಾವಧಿ ಘೋಷಣೆ ಕುರಿತಂತೆ ಇದುವರೆಗೂ ಆದೇಶ ಹೊರಡಿಸಲಾಗಿಲ್ಲ.

ಇವರ ವಿರುದ್ಧ ಶ್ರೀಮತಿ ಬಿ.ಎನ್. ಚಂದ್ರಿಕಾ, ನಂ. 71, ಕೆಎಸ್‌ಸಿಬಿ ವಸತಿ ಗೃಹ, ಕಾವೇರಿ ನಗರ, ಲಗ್ಗೆರೆ, ಬೆಂಗಳೂರು–58 ಇವರು ದಿನಾಂಕ 09–09–2010ರಂದು ಆರಕ್ಷಕ ಅಧೀಕ್ಷಕರು, ಬೆಂಗಳೂರು ನಗರ ವಿಭಾಗ ಇವರಿಗೆ ದೂರು ಸಲ್ಲಿಸಿದ್ದು ಸದರಿ ದೂರು ಹಾಗೂ ಲಗತ್ತಿಸಿರುವ ದಾಖಲಾತಿಗಳ ಬಗ್ಗೆ ಗೌಪ್ಯವಾಗಿ ವಿಚಾರಣೆ ನಡೆಸಿ ವರದಿ ನೀಡುವಂತೆ ಶ್ರೀಮತಿ ಹೆಚ್.ಆರ್. ರಾಧಾಮಣಿ, ಉಪ ಆರಕ್ಷಕ ಅಧೀಕ್ಷಕರು, (ನಗರ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು **ಉಲ್ಲೇಖ (1)**ರಲ್ಲಿ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಸೂಚಿಸಿರುತ್ತಾರೆ.

ಈ ಬಗ್ಗೆ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಇವರು ಶ್ರೀಮತಿ ಜಿ. ಸೌಮ್ಯಶ್ರೀ ಇವರನ್ನು ವಿಚಾರಣೆ ಮಾಡಲಾಗಿ ಆರೋಪಿತರು ತಮ್ಮ ಮೌಖಿಕ ಹೇಳಿಕೆಯಲ್ಲಿ ಶ್ರೀಮತಿ ಬಿ.ಎನ್. ಚಂದ್ರಿಕಾರವರಿಂದ ರೂ. 2,90,000/– ಹಣವನ್ನು ಸಾಲವಾಗಿ ಪಡೆದಿರುತ್ತೇನೆಂದು ಒಪ್ಪಿಕೊಂಡಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಶ್ರೀಮತಿ ಹೆಚ್.ಆರ್. ರಾಧಾಮಣಿ, ಉಪ ಪೊಲೀಸ್ ಅಧೀಕ್ಷಕರು, (ನಗರ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ **ಉಲ್ಲೇಖ (2)**ರಲ್ಲಿ ದಿನಾಂಕ 24–09–2010ರಂದು ಸಲ್ಲಿಸಲಾಗಿರುತ್ತದೆ.

ಆರೋಪಿತ ಶ್ರೀಮತಿ ಜಿ. ಸೌಮ್ಯಶ್ರೀರವರು ಭಾಷಾಂತರ ನಿರ್ದೇಶನಾಲಯದಲ್ಲಿ ದ್ವಿತೀಯ ದರ್ಜೆ ಸಹಾಯಕರ ಅನೇಕ ಹುದ್ದೆಗಳು ಖಾಲಿ ಇದೆಯೆಂದು ದೂರುದಾರರನ್ನು ನಂಬಿಸಿ ಕರ್ನಾಟಕ ಸರ್ಕಾರದ ಹೆಸರಿನಲ್ಲಿ ಅನಧಿಕೃತ ನೇಮಕಾತಿ ಆದೇಶಗಳನ್ನು ನೀಡಿರುವ ಬಗ್ಗೆ ದಿನಾಂಕ 24–09–2010ರಂದು **ಉಲ್ಲೇಖ (3)**ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ವಿಧಾನಸೌಧ ಪೊಲೀಸ್ ಠಾಣೆ, ಬಹುಮಹಡಿ ಕಟ್ಟಡ, ಬೆಂಗಳೂರು ಇಲ್ಲಿ ಆರೋಪಿತರ ವಿರುದ್ಧ ದೂರು ದಾಖಲು ಮಾಡಲಾಗಿರುತ್ತದೆ.

**ಉಲ್ಲೇಖ (3)**ರಂತೆ ದಾಖಲಾದ ದೂರಿನನ್ವಯ **ಉಲ್ಲೇಖ (4)**ರಲ್ಲಿ ದಿನಾಂಕ 24–09–2010ರಂದು ಪೊಲೀಸ್ ಇನ್ಸ್‌ಪೆಕ್ಟರ್, ವಿಧಾನಸೌಧ ಪೊಲೀಸ್ ಠಾಣೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರು ಪ್ರಥಮ ಮಾಹಿತಿ ವರದಿ (FIR)ಯನ್ನು ಸಲ್ಲಿಸಿರುತ್ತಾರೆ.

ಪೊಲೀಸ್ ಇನ್ಸ್‌ಪೆಕ್ಟರ್, ವಿಧಾನಸೌಧ ಪೊಲೀಸ್ ಠಾಣೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರು ನೀಡಿರುವ ಪ್ರಥಮ ಮಾಹಿತಿ ವರದಿಯ ಪ್ರತಿಯನ್ನು **ಉಲ್ಲೇಖ (5)ರಲ್ಲಿ** ಶ್ರೀಮತಿ ಹೆಚ್.ಆರ್. ರಾಧಾಮಣಿ, ಆರಕ್ಷಕ ಉಪ ಅಧೀಕ್ಷಕರು, (ನಗರ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಕಳುಹಿಸಲಾಗಿರುತ್ತದೆ.

ಆರಕ್ಷಕ ಉಪ ನಿರೀಕ್ಷಕರು, ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು–01 ಇವರ **ಉಲ್ಲೇಖ (6)**ರಲ್ಲಿ ಓದಲಾಗಿರುವ ಪತ್ರದನ್ವಯ ಆರೋಪಿತರನ್ನು ದಿನಾಂಕ 28–09–2010ರಂದು 16.00 ಗಂಟೆಗೆ ದಸ್ತಗಿರಿ ಮಾಡಿ ದಿನಾಂಕ 29–09–2010ರಂದು 15.00 ಗಂಟೆಗೆ ಮಾನ್ಯ 8ನೇ ಎಸಿಎಂಎಂ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು, ಘನ ನ್ಯಾಯಾಲಯವು ಆಪಾದಿತರನ್ನು 14 ದಿನಗಳ ಕಾಲ ನ್ಯಾಯಾಂಗ ಬಂಧನಕ್ಕೆ ಆದೇಶಿಸಿರುತ್ತದೆ.

ಆರೋಪಿತರು ಮೇಲ್ನೋಟಕ್ಕೆ ಅಪರಾಧ ಎಸಗಿರುವುದು ನೇಮಕಾತಿ ಪ್ರಾಧಿಕಾರಕ್ಕೆ ಮನದಟ್ಟಾಗಿರುವುದರಿಂದ 1957ರ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 10ನೇ ನಿಯಮದ (1)(ಖ) ಪ್ರಕರಣದೊಡನೆ ಓದಿಕೊಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಕೆಲವು ಷರತ್ತಿಗೊಳಪಟ್ಟು **ಉಲ್ಲೇಖ (7)ರಲ್ಲಿ** ದಿನಾಂಕ 06–10–2010ರಂದು ಅಮಾನತ್ತುಗೊಳಿಸಲಾಯಿತು.

**ಉಲ್ಲೇಖ (8)**ರಲ್ಲಿ ಆರೋಪಿತರಿಗೆ ತಿಳಿವಳಿಕೆ ಪತ್ರದ ಜೊತೆಗೆ ಆರೋಪ ಪಟ್ಟಿಯನ್ನು ನೀಡಿ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು. ಸದರಿ ಆರೋಪಗಳ ಪಟ್ಟಿಯಲ್ಲಿ ಆರೋಪಿತರ ವಿರುದ್ಧ ಈ ಕೆಳಕಂಡ ಆರೋಪಗಳನ್ನು ಮಾಡಲಾಗಿತ್ತು.

**ಆರೋಪ–1**

ಶ್ರೀಮತಿ ಜಿ. ಸೌಮ್ಯಶ್ರೀ, ಆದ ನೀವು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು (ಹಾಲಿ ಅಮಾನತ್ತಿನಲ್ಲಿರುವ) ನಿಮ್ಮ ಕರ್ತವ್ಯದ ಅವಧಿಯಲ್ಲಿ ನೀವು ಈ ಕೆಳಕಂಡ ದಿನಾಂಕಗಳಲ್ಲಿ ಅನಧಿಕೃತ ಗೈರು ಹಾಜರಾಗಿ ಆಯಾ ದಿನಗಳ ರಜಾ ಅವಧಿಯು ಮುಗಿದು ಅಂದರೆ, ಆ ರಜೆಗಳನ್ನು ಉಪಯೋಗಿಸಿಕೊಂಡು ನಂತರ ಕರ್ತವ್ಯಕ್ಕೆ ಹಾಜರಾಗಿ ರಜೆ ಅರ್ಜಿಗಳನ್ನು ಸಲ್ಲಿಸಿರುತ್ತೀರ.

1. ದಿನಾಂಕ 27–09–2008ರಿಂದ 04–10–2008ರವರೆಗೆ 8 ದಿನಗಳ ಗಳಿಕೆ ರಜೆ
2. ದಿನಾಂಕ 23–10–2008ರಿಂದ 24–10–2008ರವರೆಗೆ 2 ದಿನಗಳ ಗಳಿಕೆ ರಜೆ
3. ದಿನಾಂಕ 31–10–2008ರಿಂದ 03–11–2008ರವರೆಗೆ 4 ದಿನಗಳ ಗಳಿಕೆ ರಜೆ
4. ದಿನಾಂಕ 18–11–2008ರಿಂದ 22–11–2008ರವರೆಗೆ 3 ದಿನಗಳ ಪರಿವರ್ತಿತ ರಜೆ
5. ದಿನಾಂಕ 18–05–2009ರಿಂದ 23–05–2009ರವರೆಗೆ 6 ದಿನಗಳ ಗಳಿಕೆ ರಜೆ
6. ದಿನಾಂಕ 18–06–2009ರಿಂದ 23–06–2009ರವರೆಗೆ 6 ದಿನಗಳ ಪರಿವರ್ತಿತ ರಜೆ
7. ದಿನಾಂಕ 01–10–2009ರಿಂದ 03–10–2009ರವರೆಗೆ 3 ದಿನಗಳ ಪರಿವರ್ತಿತ ರಜೆ
8. ದಿನಾಂಕ 29–10–2009ರಿಂದ 31–10–2009ರವರೆಗೆ 3 ದಿನಗಳ ಪರಿವರ್ತಿತ ರಜೆ
9. ಜನವರಿ 2010ರಲ್ಲಿ 6 ದಿನಗಳ ಸಾಂದರ್ಭಿಕ ರಜೆ

10. ಫೆಬ್ರವರಿ 2010ರಲ್ಲಿ 14 ದಿನಗಳ ಪರಿವರ್ತಿತ ರಜೆ
11. ಮಾರ್ಚ್ 2010ರಲ್ಲಿ 6 ದಿನಗಳ ಪರಿವರ್ತಿತ ರಜೆ
12. ದಿನಾಂಕ 18-02-2010ರಿಂದ 06-03-2010ರವರೆಗೆ 17 ದಿನಗಳ ಗಳಿಕೆ ರಜೆ
13. ದಿನಾಂಕ 03-04-2010ರಿಂದ 09-04-2010ರವರೆಗೆ 7 ದಿನಗಳ ಗಳಿಕೆ ರಜೆ
14. ದಿನಾಂಕ 31-8-2010ರಿಂದ ಈ ವರೆಗೆ ಅನಧಿಕೃತ ಗೈರು ಹಾಜರಿ

ಈ ರೀತಿ ನೀವು ರಜೆಯ ಮೇಲೆ ತೆರಳುವ ಮುನ್ನ ಸಕ್ಷಮ ಅಧಿಕಾರಿಗಳಿಗೆ ಮುಂಚಿತವಾಗಿ ರಜೆ ಅರ್ಜಿಗಳನ್ನು ಸಲ್ಲಿಸದೆ, ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಅಥವಾ ಸಂಬಂಧಪಟ್ಟ ಅಧಿಕಾರಿಗಳ ಪೂರ್ವಾನುಮತಿ ಪಡೆಯದೆ ನೀವು ಪದೇಪದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಕರ್ತವ್ಯ ನಿರ್ಲಕ್ಷತೆಯನ್ನು ವ್ಯಕ್ತಪಡಿಸಿರುತ್ತೀರ. ಅಲ್ಲದೆ, ನಿಮ್ಮ ಅನಧಿಕೃತ ಗೈರು ಹಾಜರಿಯಿಂದ ಕಚೇರಿಯ ದೈನಂದಿನ ಕೆಲಸಕಾರ್ಯಗಳಿಗೆ ತೊಂದರೆಯುಂಟಾಗಿರುತ್ತದೆ. ನಿಮಗೆ ಕಚೇರಿಯಿಂದ ಹಲವು ಬಾರಿ ಕರ್ತವ್ಯಕ್ಕೆ ಹಾಜರಾಗಲು ಜ್ಞಾಪನ ಪತ್ರಗಳನ್ನು ಜಾರಿ ಮಾಡಿದ್ದರೂ ಸಹ ನೀವು ಸದರಿ ನೋಟಿಸುಗಳಿಗೆ ಸಮಜಾಯಿಷಿಯನ್ನು ನೀಡದೆ ಹಾಗೂ ಕರ್ತವ್ಯಕ್ಕೆ ಹಾಜರಾಗದೆ ಹಾಗೂ ನಿಮ್ಮ ಅನಧಿಕೃತ ಗೈರುಹಾಜರಾಗುವ ಪ್ರವೃತ್ತಿಯನ್ನು ಸರಿಪಡಿಸಿಕೊಳ್ಳದೆ ಸಕ್ಷಮ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿರುತ್ತೀರಿ. ಈ ರೀತಿ ನೀವು ಪದೇಪದೇ ಕರ್ತವ್ಯಕ್ಕೆ ಗೈರು ಹಾಜರಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವುದು (Habitual absentee) ನಿಮ್ಮ ಕರ್ತವ್ಯದಲ್ಲಿ ನಿಷ್ಠತೆಯಿಲ್ಲದೆ ಇರುವುದನ್ನು ತೋರ್ಪಡಿಸುತ್ತದೆ ಮತ್ತು ನೀವು ಕರ್ತವ್ಯ ಲೋಪ ಮತ್ತು ದುರ್ನಡತೆ ಎಸಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966, ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುತ್ತೀರಿ.

**ಆರೋಪ – 2**

ಶ್ರೀಮತಿ ಜಿ. ಸೌಮ್ಯಶ್ರೀ, ಆದ ನೀವು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು (ಹಾಲಿ ಅಮಾನತ್ತಿನಲ್ಲಿರುವ) ನಿಮ್ಮ ಕರ್ತವ್ಯದ ಅವಧಿಯಲ್ಲಿ ನೀವು ಸುಮಾರು 20 ಅಮಾಯಕ ಸಾರ್ವಜನಿಕರಿಗೆ ಈ ಕಚೇರಿಯಲ್ಲಿ ಹಲವು ಹುದ್ದೆಗಳು ಖಾಲಿ ಇವೆಯೆಂದು ಹೇಳಿ ಸರ್ಕಾರಿ ಕೆಲಸ ಕೊಡಿಸುವುದಾಗಿ ಸುಳ್ಳು ಹೇಳಿ ಮತ್ತು ಅವರುಗಳನ್ನು ವಂಚಿಸಿ ಆ ಜನರಿಗೆ ನಕಲಿ ಮತ್ತು ಅನಧಿಕೃತ ನೇಮಕಾತಿ ಆದೇಶಗಳಲ್ಲಿ

ನೀವೇ ನೇಮಕಾತಿ ಅಧಿಕಾರಿಯ ರುಜುವನ್ನು ಫೋರ್ಜರಿ ಮಾಡಿ ಮತ್ತು ಕಚೇರಿಯ ಮೊಹರನ್ನು ಹಾಕಿ ದುರುಪಯೋಗಿಸಿಕೊಂಡು ನಕಲಿ ನೇಮಕಾತಿ ಆದೇಶಗಳನ್ನು ನೀಡಿರುತ್ತೀರಿ. ಈ ರೀತಿಯಾಗಿ ನೀವು ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ಮೋಸ, ವಂಚನೆ ಮತ್ತು ದುರ್ನಡತೆ ಎಸಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966, ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುತ್ತೀರಿ.

**ಆರೋಪ – 3**

ಶ್ರೀಮತಿ ಜಿ. ಸೌಮ್ಯಶ್ರೀ, ಆದ ನೀವು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು (ಹಾಲಿ ಅಮಾನತ್ತಿನಲ್ಲಿರುವ) ನಿಮ್ಮ ಕರ್ತವ್ಯದ ಅವಧಿಯಲ್ಲಿ ನೀವು ಸುಮಾರು 20 ಅಮಾಯಕ ಸಾರ್ವಜನಿಕರಿಗೆ ಈ ಕಚೇರಿಯಲ್ಲಿ ಹಲವು ಹುದ್ದೆಗಳು ಖಾಲಿ ಇವೆಯೆಂದು ಹೇಳಿ ಸರ್ಕಾರಿ ಕೆಲಸ ಕೊಡಿಸುವುದಾಗಿ ಸುಳ್ಳು ಹೇಳಿ ಮತ್ತು ಅವರುಗಳನ್ನು ವಂಚಿಸಿ ಆ ಜನರಿಗೆ ನಕಲಿ ಮತ್ತು ಅನಧಿಕೃತ ನೇಮಕಾತಿ ಆದೇಶಗಳಲ್ಲಿ ನೀವೇ ನೇಮಕಾತಿ ಅಧಿಕಾರಿಯ ರುಜುವನ್ನು ಫೋರ್ಜರಿ ಮಾಡಿ ಮತ್ತು ಕಚೇರಿಯ ಮೊಹರನ್ನು ಹಾಕಿ ದುರುಪಯೋಗಿಸಿಕೊಂಡು ನಕಲಿ ನೇಮಕಾತಿ ಆದೇಶಗಳನ್ನು ನೀಡಲು ಅವರುಗಳಿಂದ ಸುಮಾರು ರೂ. 3,66,000/-ಗಳನ್ನು ಪಡೆದು ಅಮಾಯಕರನ್ನು ವಂಚನೆ ಮಾಡಿರುತ್ತೀರಿ. ಈ ರೀತಿಯಾಗಿ ನೀವು ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ಮೋಸ, ವಂಚನೆ ಮತ್ತು ದುರ್ನಡತೆ ಎಸಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966, ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುತ್ತೀರಿ.

**ಆರೋಪ – 4**

ಶ್ರೀಮತಿ ಜಿ. ಸೌಮ್ಯಶ್ರೀ, ಆದ ನೀವು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಸ್ವೀಕೃತಿ ಮತ್ತು ರವಾನೆ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು (ಹಾಲಿ ಅಮಾನತ್ತಿನಲ್ಲಿರುವ) ನಿಮ್ಮ ಕರ್ತವ್ಯದ ಅವಧಿಯಲ್ಲಿ ನೀವು ಸುಮಾರು 20 ಅಮಾಯಕ ಸಾರ್ವಜನಿಕರಿಗೆ ಈ ಕಚೇರಿಯಲ್ಲಿ ಹಲವು ಹುದ್ದೆಗಳು ಖಾಲಿ ಇವೆಯೆಂದು ಹೇಳಿ ಸರ್ಕಾರಿ ಕೆಲಸ ಕೊಡಿಸುವುದಾಗಿ ಸುಳ್ಳು ಹೇಳಿ ಮತ್ತು ಅವರುಗಳನ್ನು ವಂಚಿಸಿ ಆ ಜನರಿಗೆ ನಕಲಿ ಮತ್ತು ಅನಧಿಕೃತ ನೇಮಕಾತಿ ಆದೇಶಗಳಲ್ಲಿ ನೀವೇ ನೇಮಕಾತಿ ಅಧಿಕಾರಿಯ ರುಜುವನ್ನು ಫೋರ್ಜರಿ ಮಾಡಿ ಮತ್ತು ತಮ್ಮ ಸುಪರ್ದಿನಲ್ಲಿದ್ದ ರವಾನೆ ಸೀಲು ಮತ್ತು ಒಐಜಿಎಸ್ ಮೊಹರನ್ನು ನಕಲಿ ನೇಮಕಾತಿ ಆದೇಶಗಳಿಗೆ ಹಾಕಿ ಅದನ್ನು ದುರುಪಯೋಗಪಡಿಸಿಕೊಂಡು ಅನಧಿಕೃತ ಮತ್ತು ನಕಲಿ ನೇಮಕಾತಿ ಆದೇಶಗಳನ್ನು ನೀಡಿರುತ್ತೀರಿ. ಅವರುಗಳಿಂದ ಸುಮಾರು ರೂ. 3,66,000/-ಗಳನ್ನು ಪಡೆದು ಅಮಾಯಕರನ್ನು ವಂಚನೆ ಮಾಡಿರುತ್ತೀರಿ. ಈ ರೀತಿಯಾಗಿ ನೀವು ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ಮೋಸ, ವಂಚನೆ ಮತ್ತು ದುರ್ನಡತೆ ಎಸಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966, ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುತ್ತೀರಿ.

**ಆರೋಪ – 5**

ಶ್ರೀಮತಿ ಜಿ. ಸೌಮ್ಯಶ್ರೀ, ಆದ ನೀವು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಸ್ವೀಕೃತಿ ಮತ್ತು ರವಾನೆ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು (ಹಾಲಿ ಅಮಾನತ್ತಿನಲ್ಲಿರುವ) ನಿಮ್ಮ ಕರ್ತವ್ಯದ ಅವಧಿಯಲ್ಲಿ ನೀವು ಸುಮಾರು 20 ಅಮಾಯಕ ಸಾರ್ವಜನಿಕರಿಗೆ ಈ ಕಚೇರಿಯಲ್ಲಿ ಹಲವು ಹುದ್ದೆಗಳು ಖಾಲಿ ಇವೆಯೆಂದು ಹೇಳಿ ಸರ್ಕಾರಿ ಕೆಲಸ ಕೊಡಿಸುವುದಾಗಿ ಸುಳ್ಳು ಹೇಳಿ ಮತ್ತು ಅವರುಗಳನ್ನು ವಂಚಿಸಿ ಆ ಜನರಿಗೆ ನಕಲಿ ಮತ್ತು ಅನಧಿಕೃತ ನೇಮಕಾತಿ ಆದೇಶಗಳಲ್ಲಿ ನೀವೇ ನೇಮಕಾತಿ ಅಧಿಕಾರಿಯ ರುಜುವನ್ನು ಫೋರ್ಜರಿ ಮಾಡಿ ಮತ್ತು ತಮ್ಮ ಸುಪರ್ದಿನಲ್ಲಿದ್ದ ರವಾನೆ ಸೀಲು ಮತ್ತು ಒಐಜಿಎಸ್ ಮೊಹರನ್ನು ನಕಲಿ ನೇಮಕಾತಿ ಆದೇಶಗಳಿಗೆ ಹಾಕಿ ಅದನ್ನು ದುರುಪಯೋಗಪಡಿಸಿಕೊಂಡು ಅನಧಿಕೃತ ಮತ್ತು ನಕಲಿ ನೇಮಕಾತಿ ಆದೇಶಗಳನ್ನು ನೀಡಿರುತ್ತೀರಿ. ಅವರುಗಳಿಂದ ಸುಮಾರು ರೂ. 3,66,000/–ಗಳನ್ನು ಅಕ್ರಮವಾಗಿ ಪಡೆದು ಅಮಾಯಕರನ್ನು ವಂಚನೆ ಮಾಡಿರುತ್ತೀರಿ ಮತ್ತು ಅವರುಗಳಿಂದ ಹಣಕ್ಕೆ ಗ್ಯಾರೆಂಟಿಯಾಗಿ ಖಾಲಿ ಚೆಕ್‌ಗಳಿಗೆ ನೀವೇ ಸಹಿ ಮಾಡಿ ಆ ಜನರಿಗೆ ನೀಡಿರುತ್ತೀರಿ. ಈ ರೀತಿಯಾಗಿ ನೀವು ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡು ಮೋಸ, ವಂಚನೆ ಮತ್ತು ದುರ್ನಡತೆ ಎಸಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966, ನಿಯಮ 3(1)(i)(ii)(iii)ನ್ನು ಉಲ್ಲಂಘಿಸಿರುತ್ತೀರಿ.

ಮೇಲ್ಕಂಡ ಆರೋಪಗಳಿಗೆ ಸಂಬಂಧಿಸಿದಂತೆ ಆಪಾದಿತರು ದಿನಾಂಕ 20–04–2011ರಂದು **ಉಲ್ಲೇಖ (9)ರಲ್ಲಿ** ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿ ಸಮಜಾಯಿಷಿಯನ್ನು ಸಕ್ಷಮ ಪ್ರಾಧಿಕಾರವು ಪರಿಶೀಲಿಸಿ ಅದು ಸಮಂಜಸವಲ್ಲವೆಂದು ಪರಿಗಣಿಸಿ ಆಪಾದಿತರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ನಿರ್ಧರಿಸಿ ಸದರಿ ಆರೋಪಗಳ ವಿಚಾರಣೆಗಾಗಿ ಶ್ರೀ ಹೆಚ್.ಆರ್. ಸುಧೀರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಇವರನ್ನು ಇಲಾಖಾ ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀಮತಿ ಸೀತಾ ಲಿಂಗಸೂರು, ಸಹಾಯಕ ಆಡಳಿತಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ **ಉಲ್ಲೇಖ (10)ರಲ್ಲಿ** ನೇಮಕ ಮಾಡಲಾಯಿತು.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 10ನೇ ನಿಯಮದ (5)ನೇ ಉಪ ನಿಯಮದ (ಸಿ) ಖಂಡದ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಪಾದಿತ ಸರ್ಕಾರಿ ನೌಕರರ ವಿರುದ್ಧದ ನ್ಯಾಯಾಲಯದ ಪ್ರಕರಣ ಮತ್ತು ಇಲಾಖಾ ಶಿಸ್ತು ಪ್ರಕರಣದಲ್ಲಿ ತೀರ್ಪನ್ನು ಮತ್ತು ಅದರ ಅನ್ವಯ ತೆಗೆದುಕೊಳ್ಳಬಹುದಾದ ನಿರ್ಣಯಕ್ಕೊಳಪಟ್ಟು **ಉಲ್ಲೇಖ (11)ರಲ್ಲಿ** ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಅಮಾನತ್ತಿನ ಪೂರ್ವದಲ್ಲಿ ಹೊಂದಿರುವ ಹುದ್ದೆ ಅಂದರೆ ಭಾಷಾಂತರ ನಿರ್ದೇಶನಾಲಯದ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ದಿನಾಂಕ 18–04–2012ರಿಂದ ಮುಂದುವರೆಸಲಾಗಿದೆ.

ಪ್ರಪ್ರಥಮ ಬಾರಿಗೆ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಶ್ರೀ ಹೆಚ್.ಆರ್. ಸುಧೀರ್, ನಿವೃತ್ತ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಇವರು ವಿಚಾರಣೆ ಪ್ರಾರಂಭಿಸಿದ ನಂತರ ಅನಾರೋಗ್ಯದ ನಿಮಿತ್ತ ವಿಚಾರಣೆಯನ್ನು ಮುಂದುವರೆಸಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿ ಪ್ರಕರಣಕ್ಕೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು **ಉಲ್ಲೇಖ(12)ರಲ್ಲಿ** ಇಲಾಖೆಗೆ ಹಿಂದಿರುಗಿಸಿದರು.

ತದನಂತರ **ಉಲ್ಲೇಖ (13)ರಲ್ಲಿ** ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾದ ಶ್ರೀ ಹೆಚ್.ವಿ. ರಾಮಚಂದ್ರರಾವ್, ನಿವೃತ್ತ ನ್ಯಾಯಾಧೀಶರು ಇಲಾಖಾ ವಿಚಾರಣೆಯನ್ನು ಪೂರ್ಣಗೊಳಿಸಿ ಶಿಸ್ತು ಪ್ರಾಧಿಕಾರವು ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧ ಮಾಡಿರುವ **ಎಲ್ಲ 5 ಆರೋಪಗಳು "ರುಜುವಾತಾಗಿದೆ"** ಎಂದು **ಉಲ್ಲೇಖ (14)ರ** ತಮ್ಮ ವರದಿಯಲ್ಲಿ ನಿರ್ಣಯಿಸಿರುತ್ತಾರೆ.

ಶಿಸ್ತು ನಡವಳಿಯ ಮುಂದಿನ ಹಂತವಾಗಿ ಆರೋಪಿತರಿಗೆ ಪ್ರಥಮ ಕಾರಣ ಕೇಳುವ ನೋಟೀಸನ್ನು **ಉಲ್ಲೇಖ (15)ರಲ್ಲಿ** ವಿಚಾರಣಾ ವರದಿಯ ಪ್ರತಿಯೊಡನೆ ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

**ಉಲ್ಲೇಖ (16)ರಲ್ಲಿ** ಆರೋಪಿತರು ಪ್ರತಿರಕ್ಷಣಾ ಹೇಳಿಕೆಯನ್ನು ನೀಡಿ "ವಿಚಾರಣೆಯನ್ನು ನಿಯಮಾನುಸಾರ ನಡೆಸಿರುವುದಿಲ್ಲವೆಂದು ಕ್ರಿಮಿನಲ್ ಮೊಕದ್ದಮೆ ಇತ್ಯರ್ಥವಾಗುವ ಮೊದಲೇ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲಾಗಿದೆಯೆಂದು ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕ ವಿಶ್ಲೇಷಣೆ ಮಾಡಿ ನಿರ್ಣಯ ದಾಖಲಿಸಿರುವುದಿಲ್ಲವೆಂದು, ಇದು ವಿಚಾರಣಾ ನಿಯಮಗಳಿಗೆ ವ್ಯತಿರಿಕ್ತವಾಗಿದೆಯೆಂದು ಕರ್ನಾಟಕ ನಾಗರೀಕ (ಸಿಸಿಎ) ನಿಯಮಗಳು 1957ರ ನಿಯಮ 11(18)ವನ್ನು ಉಲ್ಲಂಘಿಸಲಾಗಿದೆಯೆಂದು ಹಾಗೂ ನನ್ನ ವಿರುದ್ಧ ಸಾಕ್ಷಿ ಹೇಳಿಕೆ ಬಗ್ಗೆ ವಿವರಣೆ ನೀಡಲು ಶಾಸನಬದ್ಧ ಅವಕಾಶ ನಿರಾಕರಿಸಿದಂತಾಗಿದೆಯೆಂದು" ತಿಳಿಸಿ ತಮ್ಮ ವಿರುದ್ಧ ಮಾಡಲಾದ ಎಲ್ಲ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಪ್ರತಿಯೊಂದು ಆರೋಪವನ್ನು ಅಲ್ಲಗಳೆಯಲು ಆರೋಪಿತರು ಕಾರಣಗಳು/ ದಾಖಲೆಗಳು/ಸಾಕ್ಷಿಗಳನ್ನು ಮೂರು ವರ್ಷಗಳಿಗೂ ಮೀರಿದ ಅವಧಿಯಲ್ಲಿ ಒದಗಿಸಲು ವಿಫಲರಾಗಿರುವಾಗ ಪ್ರತಿಯೊಂದು ಆರೋಪವನ್ನು ಪ್ರತ್ಯೇಕ ವಿಶ್ಲೇಷಣೆ ಮಾಡಿಲ್ಲವೆಂಬುದು ಅವರ ವ್ಯರ್ಥ ವಾದವೆಂದೇ ಪರಿಗಣಿಸಿದೆ.

ವಿಚಾರಣಾಧಿಕಾರಿಯು ವಿಚಾರಣೆಯನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಿ, ನೈಸರ್ಗಿಕ ನ್ಯಾಯವನ್ನು ಪಾಲಿಸಿ ವಿಚಾರಣೆ ನಡೆಸಿರುತ್ತಾರೆ. ಆದುದರಿಂದ, ವಿಚಾರಣೆಯು ನಿಯಮಾನುಸಾರ ನಡೆದಿಲ್ಲ ಎಂದು ಅಹವಾಲಿನಲ್ಲಿ ತಿಳಿಸಿರುವ ಆಪಾದಿತರ ವಾದವನ್ನು ಒಪ್ಪಲಾಗುವುದಿಲ್ಲ. ಕ್ರಿಮಿನಲ್ ಮೊಕದ್ದಮೆಯು ಇತ್ಯರ್ಥವಾಗುವವರೆಗೆ ಇಲಾಖಾ ಶಿಸ್ತು ನಡವಳಿಗಳನ್ನು ವಿಲೆ ಮಾಡದೆ ಇಡುವ ಅವಶ್ಯಕತೆಯಿಲ್ಲವೆಂದು ಸರ್ಕಾರವು ಆದೇಶ ಸಂಖ್ಯೆ ಡಿಪಿಎಆರ್ 5 ಸೇಇವಿ 96 ದಿನಾಂಕ 02–12–1997ರಲ್ಲಿ ಸ್ಪಷ್ಟೀಕರಿಸಿದೆ.

ದಿನಾಂಕ 17–03–2011ರಂದು ಆರೋಪಿತರಿಗೆ ಜಾರಿ ಮಾಡಲಾಗಿದ್ದ ದೋಷಾರೋಪಣಾ ಪಟ್ಟಿಗೆ ದಿನಾಂಕ 20–04–2011 ಮತ್ತು 02–11–2011ರಂದು ಸಲ್ಲಿಸಿರುವ ಲಿಖಿತ ಸಮಜಾಯಿಷಿಯಲ್ಲಿ ಸ್ಪಷ್ಟಪಡಿಸಿರುವ ಅಂಶಗಳನ್ನೇ ವಿಚಾರಣೆಯ ಹಂತದಲ್ಲೂ ಮತ್ತು ತದನಂತರ ಜಾರಿ ಮಾಡಲಾಗಿರುವ ತಿಳಿವಳಿಕೆ ಪತ್ರಗಳಿಗೆ ಸಲ್ಲಿಸಿರುವ ವಿವರಣೆಗಳಲ್ಲೂ ಬೇರೆಬೇರೆ ರೀತಿಯಲ್ಲಿ ಪುನರಾವರ್ತನೆ ಮಾಡಿರುತ್ತಾರೆ. ಆದುದರಿಂದ ವಿಚಾರಣಾ

ವರದಿಗೆ ಪ್ರತಿಯಾಗಿ ಸಲ್ಲಿಸಿರುವ ವಿವರಣೆಯಲ್ಲಿ ಪರಿಗಣಿಸಬೇಕಾದ ವಿಶೇಷ ಅಂಶಗಳೇನೂ ಕಂಡುಬಂದಿರುವುದಿಲ್ಲ. ಶಿಸ್ತು ನಡೆವಳಿಯ ಯಾವುದೇ ಹಂತದಲ್ಲೂ ಆರೋಪಗಳನ್ನು ಮತ್ತು/ಅಥವಾ ವಿಚಾರಣಾ ವರದಿಯನ್ನು ತಿರಸ್ಕರಿಸಲು ಪೂರಕ ದಾಖಲೆಗಳನ್ನಾಗಲೀ/ಸಾಕ್ಷಿಗಳನ್ನಾಗಲೀ ಆರೋಪಿತರು ಒದಗಿಸಿರುವುದಿಲ್ಲ.

**ಉಲ್ಲೇಖ (17)ರ** ಸರ್ಕಾರದ ಪತ್ರದಲ್ಲಿ ಆರೋಪಿತರ ವಿರುದ್ಧ ಕ್ರಿಮಿನಲ್ ಪ್ರಕರಣ ಹಾಗೂ ಇಲಾಖಾ ವಿಚಾರಣೆಯ ಬಗ್ಗೆ ತುರ್ತು ಕ್ರಮ ತೆಗೆದುಕೊಂಡು ಸರ್ಕಾರಕ್ಕೆ ತಿಳಿಸುವಂತೆ ಸೂಚಿಸಿರುತ್ತಾರೆ.

ಹಾಗಾಗಿ, ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕರು ಅವರಿಗೆ ಮೇಲೆ **ಉಲ್ಲೇಖ (18)ರಲ್ಲಿ** ಓದಲಾದ ದಿನಾಂಕ 15-04-2015ರಲ್ಲಿ ವಿಚಾರಣಾ ವರದಿಯ ಪ್ರತಿಯೊಡನೆ ಕಾರಣ ಕೇಳುವ ನೋಟೀಸು ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಮತ್ತೂ ಒಮ್ಮೆ ಅವಕಾಶ ಕಲ್ಪಿಸಲಾಯಿತು.

ಆರೋಪಿತರು ಮೇಲೆ ಓದಲಾದ ಉಲ್ಲೇಖ (16)ರಲ್ಲಿ ಸಲ್ಲಿಸಲಾಗಿದ್ದ ವಿವರಣೆಯನ್ನೇ ಪುನಃ **ಉಲ್ಲೇಖ (19)ರಲ್ಲಿ** ತಮ್ಮ ಪ್ರತಿರಕ್ಷಣಾ ಹೇಳಿಕೆಯಂತೆ ಸಲ್ಲಿಸಿ "ವಿಚಾರಣಾಧಿಕಾರಿಗಳು ತನಗೆ ಸಹಜ ನ್ಯಾಯ ತತ್ವದಂತೆ ಅವಕಾಶವನ್ನು ನೀಡಿಲ್ಲ, ವಿಚಾರಣಾ ವರದಿಯನ್ನು ನಿಯಮಾನುಸಾರ ಸಿದ್ಧಪಡಿಸಿಲ್ಲ, ಕ್ರಿಮಿನಲ್ ಮೊಕದ್ದಮೆ ಇತ್ಯರ್ಥವಾಗುವ ಮೊದಲೇ ಇಲಾಖಾ ವಿಚಾರಣೆಯನ್ನು ನಡೆಸಿರುವುದರಿಂದ ವಿಚಾರಣೆ ನಿಯಮಬಾಹಿರವಾಗಿದೆಯೆಂದು ತಿಳಿಸಿರುತ್ತಾರೆ, ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕ ವಿಶ್ಲೇಷಣೆ ಮಾಡಿ ನಿರ್ಣಯ ದಾಖಲಿಸಿರುವುದಿಲ್ಲವೆಂದು, ಇದು ವಿಚಾರಣಾ ನಿಯಮಗಳಿಗೆ ವ್ಯತಿರಿಕ್ತವಾಗಿದೆಯೆಂದು, ಕರ್ನಾಟಕ ನಾಗರೀಕ (ಸಿಸಿಎ) ನಿಯಮಗಳು 1957ರ ನಿಯಮ 11(18)ವನ್ನು ಉಲ್ಲಂಘಿಸಲಾಗಿದೆಯೆಂದು ಹಾಗೂ ಆಪಾದಿತರಿಗೆ ತಮ್ಮ ವಿರುದ್ಧ ಸಾಕ್ಷಿ ಹೇಳಿಕೆ ಬಗ್ಗೆ ವಿವರಣೆ ನೀಡಲು ಶಾಸನಬದ್ಧ ಅವಕಾಶ ನಿರಾಕರಿಸಿದಂತಾಗಿದೆಯೆಂದು" ತಿಳಿಸಿ ತಮ್ಮ ವಿರುದ್ಧ ಮಾಡಲಾದ ಎಲ್ಲ ಆರೋಪಗಳನ್ನು ಅಲ್ಲಗಳೆದಿರುತ್ತಾರೆ.

ಆರೋಪಿಯು ಸಲ್ಲಿಸಿದ ಉತ್ತರದ ಹಿನ್ನೆಲೆಯಲ್ಲಿ **ಪ್ರಕರಣವನ್ನು ಮತ್ತೊಮ್ಮೆ ಪರಿಶೀಲಿಸಲಾಗಿದೆ. ವಿಚಾರಣೆಯು ನಿಯಮಾನುಸಾರ ನಡೆದಿದ್ದು, ಆರೋಪಿಗೆ ಸಾಕಷ್ಟು ಅವಕಾಶವನ್ನು ವಿಚಾರಣಾಧಿಕಾರಿಗಳು ನೀಡಿದ್ದಾರೆಂಬುದು ಇದರಿಂದ ಸ್ಪಷ್ಟವಾಗಿರುತ್ತದೆ.**

ದಿನಾಂಕ 17-03-2011ರಂದು ಜಾರಿಗೊಳಿಸಲಾಗಿದ್ದ ದೋಷಾರೋಪಣಾ ಪಟ್ಟಿಗೆ ಆರೋಪಿತರು ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯಲ್ಲಿ ಒಳಗೊಂಡಿರುವ ಅಂಶಗಳನ್ನು ವಿಚಾರಣೆಯ ಹಂತದಲ್ಲಿ ಪುನರುಚ್ಚರಿಸಿರುತ್ತಾರೆ ಮತ್ತು ದಾಖಲಿಸಿರುತ್ತಾ. ಆರೋಪ ಪಟ್ಟಿ ಜಾರಿಯಾದ 2011ರಿಂದ 2014ರ ವರೆಗೆ 3 ವರ್ಷಗಳಷ್ಟು ದೀರ್ಘ ಅವಧಿಯಲ್ಲಿ ಆರೋಪಿತರ ವಿರುದ್ಧದ ಆರೋಪಗಳನ್ನು ಅಲ್ಲಗಳೆಯಲು ಸಮರ್ಪಕ ದಾಖಲೆಗಳನ್ನಾಗಲೀ ಸಾಕ್ಷಿಗಳನ್ನಾಗಲೀ ಒದಗಿಸಿರುವುದಿಲ್ಲವೆಂಬುದು ಸುಸ್ಪಷ್ಟವಾಗಿದೆ.

ವಿಚಾರಣಾಧಿಕಾರಿಗಳು ಸಲ್ಲಿಸಿದ ವರದಿಯ ಪ್ರತಿಯನ್ನು ದಿನಾಂಕ 15-04-2014ರಂದು ಆರೋಪಿತರಿಗೆ ತಿಳಿವಳಿಕೆ ಪತ್ರದ ಮೂಲಕ ಒದಗಿಸಿದ ನಂತರವೂ ಸಹಾ ಅವರ ಮೇಲಿದ್ದ ಆರೋಪಗಳನ್ನು ಅಲ್ಲಗಳೆಯಬಲ್ಲ ದಾಖಲೆಗಳನ್ನು/ಸಾಕ್ಷಿಗಳನ್ನು ಹಾಜರುಪಡಿಸುವಲ್ಲಿ ವಿಫಲರಾಗಿರುತ್ತಾರೆ. ಇದಲ್ಲದೆ ವಿಚಾರಣಾಧಿಕಾರಿಗಳು ಸಮಯಾವಕಾಶ ನೀಡಿಲ್ಲ, ವಿಚಾರಣೆಯನ್ನು ಸರಿಯಾಗಿ ನಡೆಸಿರುವುದಿಲ್ಲವೆಂದು ವ್ಯರ್ಥಾಲಾಪದಲ್ಲಿ ತೊಡಗಿರುತ್ತಾರೆ. ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿದ್ದು ಮೌಖಿಕ/ಲಿಖಿತ ಹೇಳಿಕೆ ನೀಡಿರುತ್ತಾರೆ. ಆದರೆ ಯಾವುದೇ ಹಂತದಲ್ಲೂ ಸಮಯಾವಕಾಶ ನೀಡದಿರುವ ಹಾಗೂ ವಿಚಾರಣೆಯನ್ನು ನಿಯಮಾನುಸಾರ ನಡೆಸುತ್ತಿಲ್ಲ ಎಂಬ ಬಗ್ಗೆ ವಿಚಾರಣಾಧಿಕಾರಿಗಳ ಅಥವಾ ಶಿಸ್ತು ಪ್ರಾಧಿಕಾರದ ಗಮನಕ್ಕೆ ತಂದಿಲ್ಲ.

ಕ್ರಿಮಿನಲ್ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇರುವ ಪ್ರಕರಣಗಳಲ್ಲಿ ಇಲಾಖಾ ಶಿಸ್ತು ನಡೆವಳಿಗಳನ್ನು ಹೂಡುವಂತಿಲ್ಲ ಅಥವಾ ಮುಂದುವರಿಸುವಂತಿಲ್ಲ ಅಥವಾ ಅಂತ್ಯಗೊಳಿಸಿ ಆದೇಶ ಹೊರಡಿಸುವಂತಿಲ್ಲ ಎಂಬ ಆರೋಪಿತರ ವಾದವನ್ನು ಒಪ್ಪಲಾಗದು.

ಸರ್ಕಾರವು ಡಿಪಿಎಆರ್ 5 ಸೇಇವಿ 96 ದಿನಾಂಕ 02-12-1997ರಲ್ಲಿ "**ನ್ಯಾಯಾಲಯದಲ್ಲಿ ಹೂಡುವ ಪ್ರಕ್ರಿಯೆ ಹಾಗೂ ಇಲಾಖಾ ವಿಚಾರಣೆಯಲ್ಲಿ ಹೂಡುವ ಪ್ರಕ್ರಿಯೆ ಬೇರೆ ಬೇರೆ ಪ್ರಕ್ರಿಯೆಗಳಾಗಿವೆ. ಸರ್ಕಾರಿ ನೌಕರರ ಮೇಲೆ ನ್ಯಾಯಾಲಯಗಳಲ್ಲಿ ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದಾಗ ಅದೇ ಆರೋಪಗಳ ಬಗ್ಗೆ ಶಿಸ್ತಿನ ಕ್ರಮವನ್ನು ನಡೆಸಬಹುದಾಗಿದೆ**" ಎಂಬ ಸ್ಪಷ್ಟೀಕರಣವನ್ನು ಈ ಮೂಲಕ ಪುನರುಚ್ಚರಿಸಿದೆ. ಈ ಆದೇಶವೂ ಸಹಾ ಸರ್ವೋಚ್ಚ ನ್ಯಾಯಾಲಯದ ತೀರ್ಪಿನನ್ವಯವೇ ಹೊರಡಿಸಲಾಗಿದೆ.

ಇಲಾಖಾ ಶಿಸ್ತು ನಡೆವಳಿಗಳು ಅರೆ-ನ್ಯಾಯಿಕ ಪ್ರಕರಣಗಳಾಗಿದ್ದು ಶಿಸ್ತು ಪ್ರಾಧಿಕಾರಗಳು ಆರೋಪಿತ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಗರಿಷ್ಠ ದಂಡನೆಯನ್ನು ವಿಧಿಸಬಹುದಾದರೂ ಜೈಲು ಶಿಕ್ಷೆಯಂತಹ ದಂಡನೆಯನ್ನು ವಿಧಿಸುವುದು ನ್ಯಾಯಾಲಯದ ವ್ಯಾಪ್ತಿಯಲ್ಲಿ ಬರುತ್ತದೆ.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ಪ್ರಕಾರ ಯಾವುದೇ ನೌಕರನ ವಿರುದ್ಧ ಕ್ರಿಮಿನಲ್ ಆರೋಪ ಸಾಬೀತಾಗಿ ನ್ಯಾಯಾಲಯವು ದಂಡನೆ ವಿಧಿಸಿದ್ದಲ್ಲಿ ಅಂತಹ ನೌಕರನನ್ನು ಸೇವೆಯಿಂದ ವಜಾಗೊಳಿಸಬೇಕಾಗಿರುತ್ತದೆ.

20 ಜನ ಅಮಾಯಕ ಸಾರ್ವಜನಿಕರಿಂದ ಕೆಲಸ ಕೊಡಿಸುವುದಾಗಿ ನಂಬಿಸಿ ಹಣ ಪಡೆದು ವಂಚಿಸಿರುವ ಆರೋಪಿತರು ವಿಚಾರಣೆಯ ಹಂತದಲ್ಲಿ ಹಾಗೂ ತದನಂತರದ ಕಾರಣ ಕೇಳುವ ನೋಟೀಸುಗಳಿಗೆ ಪ್ರತಿಯಾಗಿ ವಂಚಿತ ವ್ಯಕ್ತಿಗಳಿಂದ ಸಾಲ ಪಡೆದಿರುವುದಾಗಿ ಹಾಗೂ ಸರ್ಕಾರದ ಹಣವನ್ನೇನೂ ದುರುಪಯೋಗಪಡಿಸಿಕೊಂಡಿಲ್ಲವೆಂಬ ಕಾರಣಗಳನ್ನು ಒಡ್ಡಿರುತ್ತಾರೆ.

ಹಾಗೆ ಅಮಾಯಕರಿಂದ ಸಾಲ ಪಡೆದಿದ್ದಲ್ಲಿ ಯಾರಿಂದ ಸಾಲ ಪಡೆದಿದ್ದೇನೆಂದು ತಿಳಿಸಿರುತ್ತಾರೋ ಅಂತಹ ವ್ಯಕ್ತಿಗಳಿಗೆ ನೇಮಕಾತಿ ಆದೇಶ ಹೊರಡಿಸುವ ಅವಶ್ಯಕತೆ ಏನಿತ್ತು, ಅವರ ಸಾಲದ ಹಣ ಹಿಂದಿರುಗಿಸಬಹುದಾಗಿತ್ತಲ್ಲವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆದುದರಿಂದ ಅಮಾಯಕ ವ್ಯಕ್ತಿಗಳಿಂದ ಆರೋಪಿತರು ಕೆಲಸ ಕೊಡಿಸುವ ಆಶ್ವಾಸನೆ ನೀಡಿಯೇ ಲಂಚ ಪಡೆದು ದುರ್ನಡತೆ ಎಸಗಿರುತ್ತಾರೆ ಹಾಗೂ ವಸೂಲು ಮಾಡಿರುವ ಹಣವನ್ನು ಜೀರ್ಣಿಸಿಕೊಳ್ಳುವ ಹುನ್ನಾರದಿಂದಲೇ ಕಚೇರಿ ಸೀಲುಗಳ ದುರುಪಯೋಗ/ಖೊಟ್ಟಿ ಸಹಿ/ಭ್ರಷ್ಟಾಚಾರ/ದಾಖಲೆಗಳ ಸೃಷ್ಟಿ ಮಾಡಿ ನೇಮಕಾತಿ ಆದೇಶ ಹೊರಡಿಸಿರುತ್ತಾರೆ ಎಂಬುದು ಸಂದೇಹಕ್ಕಾಸ್ಪದವಿಲ್ಲದೆ ದೃಢಪಡುತ್ತದೆ. **ಸೇವೆಗೆ ಸೇರಿದ ಮೂರು ವರ್ಷಗಳ ಅವಧಿಯ ಒಳಗೆ ಹಾಗೂ ಕಾಯಂಪೂರ್ವ**

**ಸೇವಾವಧಿ ಘೋಷಣೆಯಾಗುವ ಮುನ್ನವೇ ಗಂಭೀರವಾದ ದುರ್ನಡತೆ, ಅಧಿಕಾರ ದುರುಪಯೋಗ ಹಾಗೂ ಭ್ರಷ್ಟಾಚಾರ ಎಸಗಿರುವ ಆರೋಪಿತರಿಗೆ ದಂಡನೆ ವಿಧಿಸದಿರಲು ಸಕಾರಣಗಳು ಇರುವುದಿಲ್ಲ.**

ಆರೋಪಿತರು ನೀಡಿರುವ ಪ್ರತಿರಕ್ಷಣಾ ಹೇಳಿಕೆಯು ಸಕಾರಣ ಅಲ್ಲ ಎಂಬುದು ವಿಚಾರಣಾಧಿಕಾರಿಯವರ ವರದಿಯಿಂದ ತಿಳಿದು ಬಂದಿದೆ. ಸದರಿ ವರದಿಯನ್ನು ಸಕ್ಷಮ ಶಿಸ್ತು ಪ್ರಾಧಿಕಾರ ಸಂಪೂರ್ಣವಾಗಿ ಒಪ್ಪಿದ್ದು ಅದನ್ನು ಅಂಗೀಕರಿಸಿದೆ. ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪದಿರಲು ಯಾವುದೇ ಸಕಾರಣಗಳಾಗಲೀ/ ದಾಖಲೆಗಳಾಗಲೀ/ಸಾಕ್ಷ್ಯಾಧಾರಗಳಾಗಲೀ ಇರುವುದಿಲ್ಲ. ಆದುದರಿಂದ ಆರೋಪಿತರ ವಿರುದ್ಧ ಮಾಡಲಾಗಿದ್ದ ಎಲ್ಲ ಆರೋಪಗಳೂ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪುತ್ತೇನೆ ಹಾಗೂ ಶ್ರೀಮತಿ ಜಿ. ಸೌಮ್ಯಶ್ರೀ ಇವರು ಕಠಿಣ ದಂಡನೆಗೆ ಅರ್ಹರಾಗಿರುತ್ತಾರೆಂದು ನಿರ್ಣಯಿಸಿ ಕಠಿಣ ದಂಡನೆ ವಿಧಿಸಲು ತೀರ್ಮಾನಿಸಿರುತ್ತೇನೆ.

ಆದುದರಿಂದ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ ಭಾನಿ 61/ಆಡಳಿತ/2010, ಬೆಂಗಳೂರು ದಿನಾಂಕ 21-05-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 9(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಐ.ಎಂ. ಕಂಬಳಿ, ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರನ್ವಯ ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿರುತ್ತೇನೆ.

ಶ್ರೀಮತಿ ಜಿ. ಸೌಮ್ಯಶ್ರೀ, ದ್ವಿತೀಯ ದರ್ಜೆ ಸಹಾಯಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಹಾಗೂ ಭಾಷಾಂತರ ನಿರ್ದೇಶನಾಲಯದ ಕರ್ತವ್ಯದಿಂದ ಬಿಡುಗಡೆ ಮಾಡಲಾಗಿದೆ.

**ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ**
**ಭಾಷಾಂತರ ನಿರ್ದೇಶನಾಲಯ**

**PR. 613**

**ಭಾಷಾಂತರ ನಿರ್ದೇಶನಾಲಯ**

**ಪೋಡಿಯಂ ಬ್ಲಾಕ್, ನೆಲಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಡಾ ಬಿ. ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು 01**

**ಸಂ: ಭಾನಿ 43/ಆಡಳಿತ/ಶೀಘ್ರಲಿಪಿ/ಮುಂಬಡ್ತಿ/2014, ದಿನಾಂಕ: 20-05-2015**

**ಅಧಿಕೃತ ಜ್ಞಾಪನ**

**ವಿಷಯ:** ಶ್ರೀಮತಿ ಪಿ. ಹೇಮಲತ, ಶೀಘ್ರಲಿಪಿಗಾರರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಶೀಘ್ರಲಿಪಿಗಾರರ ಹುದ್ದೆಯಿಂದ ಬೆರಳಚ್ಚುಗಾರರ ಹುದ್ದೆಗೆ ಹಿಂಬಡ್ತಿ ನೀಡುವ ಬಗ್ಗೆ.

**ಉಲ್ಲೇಖ:**
1. ಶ್ರೀಮತಿ ಪಿ. ಹೇಮಲತ, ಬೆರಳಚ್ಚುಗಾರರು, ಇವರ ಮನವಿ ದಿನಾಂಕ 09.05.2014.
2. ಈ ನಿರ್ದೇಶನಾಲಯದ ಆದೇಶ ಸಂಖ್ಯೆ ಭಾನಿ43/ಆಡಳಿತ/ಶೀಘ್ರಲಿಪಿ/ ಮುಂಬಡ್ತಿ/2014, ದಿನಾಂಕ 30.07.2014.
3. ಈ ನಿರ್ದೇಶನಾಲಯದ ಪತ್ರ ಸಂಖ್ಯೆ ಭಾನಿ 43/ಆಡಳಿತ/ಶೀಘ್ರಲಿಪಿ/ಮುಂಬಡ್ತಿ/2014 ದಿನಾಂಕ 16.08.2014.
4. ಸರ್ಕಾರದ ಪತ್ರ ಸಂಖ್ಯೆ ಸಂವ್ಯಶಾಇ 49/ಭಾನಿವಿ/2014, ದಿನಾಂಕ 11.09.2014.
5. ಈ ನಿರ್ದೇಶನಾಲಯದ ನೋಟೀಸ್ ಸಂಖ್ಯೆ ಭಾನಿ 43/ಆಡಳಿತ/ಶೀಘ್ರಲಿಪಿ/ ಮುಂಬಡ್ತಿ/2014 ದಿನಾಂಕ 18-09-2014.
6. ಶ್ರೀಮತಿ ಪಿ. ಹೇಮಲತ, ಶೀಘ್ರಲಿಪಿಗಾರರು ಇವರ ಮನವಿ ದಿನಾಂಕ 22-09-2014.
7. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 203 ಸೇಇಮು 2014 ದಿನಾಂಕ 19-02-2015.
8. ಈ ನಿರ್ದೇಶನಾಲಯದ ಕಾರಣ ಕೇಳುವ ಅಂತಿಮ ನೋಟೀಸು ದಿನಾಂಕ 17-04-2015.
9. ಶ್ರೀಮತಿ ಪಿ. ಹೇಮಲತ, ಶೀಘ್ರಲಿಪಿಗಾರರು ಇವರ ಉತ್ತರ ದಿನಾಂಕ 02-05-2015.

**ಪ್ರಸ್ತಾವನೆ:**

ಶ್ರೀಮತಿ ಪಿ. ಹೇಮಲತ ಆದ ಇವರು ದಿನಾಂಕ 12-01-2009ರಂದು ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದಲ್ಲಿ ಬೆರಳಚ್ಚುಗಾರರಾಗಿ ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಸದರಿ ಇಲಾಖೆಯಿಂದ ನಿರಾಕ್ಷೇಪಣಾ ಪತ್ರವನ್ನು ಪಡೆದು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಅರ್ಜಿ ಸಲ್ಲಿಸಿ ಭಾಷಾಂತರ ನಿರ್ದೇಶನಾಲಯದ ಬೆರಳಚ್ಚುಗಾರರ ಹುದ್ದೆಗೆ ಆಯ್ಕೆಗೊಂಡಿದ್ದು, ಕರ್ನಾಟಕ ಸಿವಿಲ್ ಸೇವಾ ನಿಯಮ 252(ಬಿ)ರನ್ವಯ ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದಿಂದ ಬಿಡುಗಡೆ ಹೊಂದಿರುತ್ತಾರೆ. ತದನಂತರ ದಿನಾಂಕ 15-02-2013ರಂದು ಭಾಷಾಂತರ ನಿರ್ದೇಶನಾಲಯದ ಆದೇಶದನ್ವಯ ಬೆರಳಚ್ಚುಗಾರರ ಹುದ್ದೆಯ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಸದರಿಯವರು ದಿನಾಂಕ 09-05-2014ರಂದು ಉಲ್ಲೇಖ (1)ರಲ್ಲಿ ಮನವಿ ಸಲ್ಲಿಸಿ ಭಾಷಾಂತರ ನಿರ್ದೇಶನಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗೆ ಮುಂಬಡ್ತಿ ನೀಡುವಂತೆ ಕೋರಿರುತ್ತಾರೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 26 ಎಸ್‌ಆರ್‌ಡಿ 1999 ದಿನಾಂಕ 09–03–2001ರ ಭಾಷಾಂತರ ನಿರ್ದೇಶನಾಲಯದ ವೃಂದ ಮತ್ತು ನೇಮಕಾತಿ ನಿಯಮ 2001ರ ಮೇರೆಗೆ ಶೀಘ್ರಲಿಪಿಗಾರರ ಹುದ್ದೆಗೆ ಮುಂಬಡ್ತಿ ಹೊಂದಲು ಬೆರಳಚ್ಚುಗಾರರ ಹುದ್ದೆಯಲ್ಲಿ ಕನಿಷ್ಠ ಮೂರು ವರ್ಷಗಳ ಸೇವೆಯನ್ನು ಸಲ್ಲಿಸಬೇಕಾಗಿರುತ್ತದೆ.**

ಸದರಿ ನಿಯಮಗಳಿಗೆ ಸಂಬಂಧಿಸಿದ ಭಾಗವನ್ನು ಕೆಳಗೆ ಉದ್ಧರಿಸಿದೆ:

| Sl No | Designation of post and pay scale | No. of Posts | | | Method of Recruitment | Minimum Qualification |
|---|---|---|---|---|---|---|
| | | Permanent | Temporary | Deputation | | |
| 10 | Stenographer (Rs. 14550-26700) | 9 | - | - | By Promotion from the cadre of Typists and if no suitable persons are available for promotion, then by direct recruitment in accordance with the Karnataka Civil Service (Recruitment to the posts of Stenographers and Typists) Rules, 1983. | **For promotion:** (1) Qualification as specified for Direct Recruitment in the Karnataka Civil Service (Recruitment to the posts of Stenographers and Typists Rules, 1983. (2) **Must have put in not less than three years of service in the cadre of Typists.** |

ಆದರೆ, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಯನ್ನು (ಸುಮಾರು 4 ವರ್ಷ 1 ತಿಂಗಳು) ಗಣನೆಗೆ ತೆಗೆದುಕೊಂಡು ಈ ನಿರ್ದೇಶನಾಲಯದಲ್ಲಿ ಶೀಘ್ರಲಿಪಿಗಾರರ ಹುದ್ದೆಗೆ ಮುಂಬಡ್ತಿ ನೀಡುವ ಸಂದರ್ಭದಲ್ಲಿ ಜ್ಯೇಷ್ಠತೆಗೆ ಪರಿಗಣಿಸಿ ದಿನಾಂಕ 30–07–2014 (ಉಲ್ಲೇಖ–2) ರಿಂದ ಜಾರಿಗೆ ಬರುವಂತೆ ಮುಂಬಡ್ತಿಯನ್ನು ನೀಡಲಾಗಿದೆ.

ಸದರಿ ಪ್ರಕರಣಕ್ಕೆ ಅನ್ವಯಿಸಬಹುದಾದ ಕರ್ನಾಟಕ ಸಿವಿಲ್ ಸೇವಾ ನಿಯಮ 252(ಬಿ)ನ್ನು ಸಿದ್ಧ ಮಾಹಿತಿಗಾಗಿ ಮುಂದೆ ಒದಗಿಸಿದೆ.

252(b) Resignation of an appointment to take up with proper permission, another appointment, whether permanent or temporary, service in which counts in full or in part, is not a resignation of public service.

1. Benefit of past service under Rule 252(b) of the KCSRs procedure to be followed.- Under Rule 252(b) of the KCSRs, resignation of an appointment to take up with proper permission another appointment whether permanent or temporary service in which counts in full or part is not resignation from public service. A question has been raised whether in such cases a separate sanction should be issued indicating that the resignation has been accepted under the above provision, in order to enable the audit/Administrative officer to regulate the consequential benefits in the matter of pay fixation, carry forward of leave, pension, etc. The matter has been considered and it has been decided that in cases of the above type the order accepting the resignation should clearly indicate that the employee is resigning to join another appointment with proper permission and that the benefits under Rule 252(b) ibid will be admissible to him. The contents of the above order should also be noted in the Service Books of the individuals concerned under proper attestation. The issue of any separate sanction is considered not necessary.

ಮೇಲ್ಕಂಡ ನಿಯಮದ ಮೇರೆಗೆ ಹಿಂದಿನ ಸೇವೆಯನ್ನು ವಿಶ್ರಾಂತಿ ವೇತನಕ್ಕಾಗಿ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಬೇಕಾದರೆ ಕರ್ನಾಟಕ ಸಿವಿಲ್ ಸೇವಾ ನಿಯಮ 224(ಬಿ)ನ್ನು ಅನುಸರಿಸಬೇಕಾಗುತ್ತದೆ. ಸದರಿ ನಿಯಮ ಈ ಕೆಳಕಂಡಂತಿದೆ.

Request for counting of qualifying service for pension.

**1. Notwithstanding anything contained in rules 219-A, 224-**

A, 235, 235-A, 235-B, 247, 247-A, 248, 248-A, 248-AA, 252(b), 416, 417 every employee desires to have the benefit of counting their previous service of additional years as qualifying service for pension, as the case may be under these rules shall make a request in writing to the appointing Authority within three years from the date of joining the Government service or within three years from the date of effect of this rule as the case may be. No claim made after the above specified time limit, shall be entertained by the appointing authority.

2. The appointing authority in turn shall, with requisite records in support of the claim, obtain the approval of the Government before passing the appropriate order.

ಮೇಲ್ಕಂಡ ಎಲ್ಲಾ ನಿಯಮಗಳೂ ನಿವೃತ್ತಿ ವೇತನ ಲೆಕ್ಕಾಚಾರಕ್ಕಾಗಿ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತಂತೆ ಆಗಿರುತ್ತವೆಯೇ ಹೊರತು ಸೇವಾ ಜ್ಯೇಷ್ಠತೆ ಬಗ್ಗೆ ಏನನ್ನೂ ಹೇಳುವುದಿಲ್ಲ.

ಒಂದು ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸರ್ಕಾರಿ ನೌಕರನು ಸರ್ಕಾರದ ಇನ್ನೊಂದು ಇಲಾಖೆಯಲ್ಲಿನ ಹುದ್ದೆಗೆ ನೇರ ನೇಮಕಾತಿ ಬಯಸಿ ಅರ್ಜಿ ಸಲ್ಲಿಸಿ, ಆಯ್ಕೆಯಾಗಿ ನೇರ ನೇಮಕಾತಿ ಹೊಂದಿದ ಸರ್ಕಾರಿ ನೌಕರನ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರನ (ಜ್ಯೇಷ್ಠತೆ) ನಿಯಮಗಳು 1957ರ ನಿಯಮ 5ರನ್ವಯ ನೇಮಕಾತಿ ಆದೇಶ ಹೊರಡಿಸಿದ ದಿನಾಂಕದಿಂದ ನಿರ್ಧರಿಸಬೇಕಾಗುತ್ತದೆ. ಹಿಂದಿನ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯನ್ನು ಜ್ಯೇಷ್ಠತೆಗೆ ಪರಿಗಣಿಸಲು ಆಸ್ಪದ ಇರುವುದಿಲ್ಲ.

ಆದ್ದರಿಂದ ಹಿಂದಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಯನ್ನು ಗಣನೆಗೆ ತೆಗೆದುಕೊಂಡು ಸದರಿಯವರಿಗೆ ಪದೋನ್ನತಿ ನೀಡಿರುವುದು ನಿಯಮಾನುಸಾರ ಇಲ್ಲದಿರುವುದರಿಂದ ಮತ್ತು ಈ ರೀತಿಯ ಸಂದರ್ಭಗಳು ಮುಂದೆಯೂ ಉದ್ಭವಿಸಬಹುದಾಗಿರುವುದರಿಂದ, ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೌಕರರ ಹಿತದೃಷ್ಟಿಯಿಂದ ಸ್ಪಷ್ಟೀಕರಣ ನೀಡುವಂತೆ ಉಲ್ಲೇಖ (3)ರಲ್ಲಿ ಸರ್ಕಾರಕ್ಕೆ ಪತ್ರ ಬರೆಯಲಾಗಿತ್ತು.

ಉಲ್ಲೇಖ(4)ರ ಸರ್ಕಾರದ ಪತ್ರದಲ್ಲಿ ಶ್ರೀಮತಿ ಪಿ. ಹೇಮಲತ, ಬೆರಳಚ್ಚುಗಾರರು, ಇವರು ಭಾಷಾಂತರ ನಿರ್ದೇಶನಾಲಯದಲ್ಲಿ ದಿನಾಂಕ 15.02.2013ರಂದು ಕರ್ತವ್ಯಕ್ಕೆ ಹಾಜರಾಗಿ ವರದಿ ಮಾಡಿಕೊಂಡಿದ್ದು, ಸದರಿ ಹುದ್ದೆಯಿಂದ ಶೀಘ್ರಲಿಪಿಗಾರರಾಗಿ ಮುಂಬಡ್ತಿ ಹೊಂದಲು ಅಗತ್ಯವಿರುವ 3 ವರ್ಷಗಳ ಸೇವೆ ಪೂರ್ಣಗೊಳಿಸದೇ ಸದರಿಯವರಿಗೆ ಮುಂಬಡ್ತಿ ನೀಡಿರುವುದು ನಿಯಮಗಳಿಗೆ ವಿರುದ್ಧವಾಗಿದೆ ಎಂದು ತಿಳಿಸಿ ಸದರಿ ನೌಕರರನ್ನು ಶೀಘ್ರಲಿಪಿಗಾರರ ಹುದ್ದೆಯಿಂದ ಬೆರಳಚ್ಚುಗಾರರ ಹುದ್ದೆಗೆ ಹಿಂಬಡ್ತಿಗೊಳಿಸುವಂತೆ ನಿರ್ದೇಶನ ನೀಡಲಾಗಿದೆ.

ಈ ಬಗ್ಗೆ ಉಲ್ಲೇಖ (5)ರಲ್ಲಿ ಮುಂಬಡ್ತಿ ಹೊಂದಿದ ಹುದ್ದೆಯಿಂದ ಹಿಂದಿನ ಹುದ್ದೆಗೆ ಏಕೆ ಹಿಂಬಡ್ತಿಗೊಳಿಸಬಾರದು ಎಂಬ ಬಗ್ಗೆ ಹೇಳಿಕೆ ಏನಾದರೂ ಇದ್ದಲ್ಲಿ ಮೂರು ದಿನಗಳ ಒಳಗಾಗಿ ಲಿಖಿತದಲ್ಲಿ ಸಲ್ಲಿಸುವಂತೆ ಈಗಾಗಲೇ ದಿನಾಂಕ 18-09-2014ರಲ್ಲಿ ಸದರಿ ನೌಕರರಿಗೆ ನೋಟೀಸು ನೀಡಲಾಗಿತ್ತು. ಉಲ್ಲೇಖ (6)ರಲ್ಲಿ ಸದರಿ ನೌಕರರು "ಈ ಹಿಂದೆ ಒಂದು ಇಲಾಖೆಯಲ್ಲಿ ಸರ್ಕಾರಿ ಸೇವೆಗೆ ನೇಮಕಗೊಂಡಿದ್ದು ಇನ್ನೊಂದು ಇಲಾಖೆಯ ಹುದ್ದೆಗೆ ಮಾತ್ರ ಇಲಾಖೆಯ ಮೂಲಕವೇ ಅರ್ಜಿ ಸಲ್ಲಿಸಿದ್ದು, ನೇರ ನೇಮಕಾತಿ ನಿಯಮಗಳಿಗೆ ಅನುಸಾರವಾಗಿ ಇನ್ನೊಂದು ಹುದ್ದೆಗೆ ಆಯ್ಕೆಯಾಗಿ ಆ ಇಲಾಖೆಯಿಂದ ನೇಮಕಗೊಂಡಾಗ ಮಾತ್ರ ಇಲಾಖೆಯಿಂದ ಅಧಿಕೃತವಾಗಿ ಅನುಮತಿ ಪಡೆದೇ ಇನ್ನೊಂದು ಇಲಾಖೆಯ ಹುದ್ದೆಗೆ ಸೇರಿದಾಗ length of service ಪರಿಗಣನೆ ವಿಷಯಗಳಲ್ಲಿ "it is a just and wholesome principle commonly applied where persons from different sources are drafted to serve in a new service that their pre-existing total length of service in the parent department should be respected and presented by taking the same into account in matters pertaining to promotion to the higher post in the new service cadre" ಎನ್ನುವುದು "one of the cardinal principles of the service jurisprudence" ಎಂದು ಸರ್ಕಾರಿ ಸೇವಾ ವಿಚಾರಗಳಲ್ಲಿ ಅನುಭವವುಳ್ಳವರು ಹೇಳಿದ್ದಾರೆ" ಎಂಬ ಸಮಜಾಯಿಷಿಯನ್ನು ನೀಡಿದ್ದು ಅದು ಸಮಂಜಸವಾಗಿರುವುದಿಲ್ಲ.

ಉಲ್ಲೇಖ (7)ರಲ್ಲಿ ಪ್ರಸ್ತುತ ಕೆಳಸಹಿದಾರರು ಸ್ಥಾನಾಪನ್ನ ಪದೋನ್ನತಿಯಿಂದಾಗಿ ನಿರ್ದೇಶಕರ ಹುದ್ದೆಯನ್ನು ಧಾರಣ ಮಾಡಿರುವುದರಿಂದ ಉಲ್ಲೇಖ (8)ರಲ್ಲಿ ಸದರಿಯವರಿಗೆ ಅಂತಿಮ ನೋಟೀಸು ಜಾರಿಗೊಳಿಸಲಾಯಿತು.

ಉಲ್ಲೇಖ (9)ರಲ್ಲಿ ನೋಟೀಸಿಗೆ ಸಮಜಾಯಿಷಿಯನ್ನು ನೀಡಿರುತ್ತಾರೆ. ಸದರಿ ಸಮಜಾಯಿಷಿಯಲ್ಲಿ "ಮಾನ್ಯ ಸರ್ವೋಚ್ಚ ನ್ಯಾಯಾಲಯವು Smt. Renu Mullick V. Union of India and another (AIR 1994 SUPREME COURT 1152) ಪ್ರಕರಣದಲ್ಲಿ ತೀರ್ಪು ನೀಡುವಾಗ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

> Constitution of India, Art. 309-Central Excise and Land Customs Dept. Group (c) Posts Recruitment Rules (1976), R.4-PROMOTION-Executive Instructions Dt. 20-05-1980, Para 2(ii) – inspector – Appointment of U.D.C. by promotion – U.D.C. in question transferee on her own request from other collectorate – His/her seniority for eligibility for purpose of promotion – past service in previous collectorate – cannot be ignored." ಎಂದು ತಿಳಿಸಿರುತ್ತಾರೆ.

ಸಮಜಾಯಿಷಿಯಲ್ಲಿ ಸದರಿ ನೌಕರರು ಉಲ್ಲೇಖಿಸಿರುವ ತೀರ್ಪು ಕೇಂದ್ರ ಸರ್ಕಾರದ ನಿಯಮಗಳಿಗೆ ಸಂಬಂಧಪಟ್ಟಿದ್ದಾಗಿರುತ್ತದೆ.

ಕರ್ನಾಟಕ ಸರ್ಕಾರಿ ನೌಕರರ ಜ್ಯೇಷ್ಠತೆ ನಿಯಮಗಳು, 1967ರ ಪ್ರಕಾರ ಯಾವುದೇ ನೌಕರನು ತನ್ನ ವೈಯಕ್ತಿಕ ಹಿತಾಸಕ್ತಿಗಾಗಿ ಒಂದು ಇಲಾಖೆಯಿಂದ ಅಥವಾ ಒಂದು ಯೂನಿಟ್ ಆಫ್ ಸೀನಿಯಾರಿಟಿಯಿಂದ ಬೇರೊಂದು ಇಲಾಖೆ ಅಥವಾ ಯೂನಿಟ್ ಆಫ್ ಸೀನಿಯಾರಿಟಿಗೆ ಸ್ವಂತ ಒಪ್ಪಿಗೆಯಿಂದ ಆಯ್ಕೆ/ನೇಮಕಾತಿ/ ವರ್ಗಾವಣೆ ಹೊಂದಿದಲ್ಲಿ ಹಾಗೆ ಹೊಸ ಹುದ್ದೆಗೆ ಹಾಜರಾದ ದಿನಾಂಕದಿಂದ ಅವನ ಸೇವಾ ಜ್ಯೇಷ್ಠತೆ ಪರಿಗಣಿಸಬೇಕಾಗುತ್ತದೆ.

ಮೇಲೆ ಒದಗಿಸಿರುವ ನಿಯಮಗಳು ಹಾಗೂ ಚರ್ಚಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 02-05-2015ರಂದು ಸದರಿಯವರು ನೀಡಿರುವ ವಿವರಣೆಯು ಸಮಂಜಸವಾಗಿರುವುದಿಲ್ಲ. ಸದರಿಯವರಿಗೆ ಬೆರಳಚ್ಚುಗಾರರ ಹುದ್ದೆಯಿಂದ ಶೀಘ್ರಲಿಪಿಗಾರರ ಹುದ್ದೆಗೆ ನೀಡಿರುವ ಮುಂಬಡ್ತಿಯು ಭಾಷಾಂತರ ನಿರ್ದೇಶನಾಲಯದ ವೃಂದ ಮತ್ತು ನೇಮಕಾತಿ ನಿಯಮಗಳು ಮತ್ತು ಜ್ಯೇಷ್ಠತಾ ನಿಯಮಗಳಿಗೆ ವಿರುದ್ಧವಾಗಿದೆ. ಆದುದರಿಂದ ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ ಭಾನಿ 43/ಆಡಳಿತ/ಮುಂಬಡ್ತಿ/2014, ಬೆಂಗಳೂರು ದಿನಾಂಕ 20-05-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಪಿ. ಹೇಮಲತ, ಶೀಘ್ರಲಿಪಿಗಾರರು ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಶೀಘ್ರಲಿಪಿಗಾರರ ಹುದ್ದೆ (ವೇತನ ಶ್ರೇಣಿ ರೂ. 14550-26700) ಯಿಂದ ಬೆರಳಚ್ಚುಗಾರರ ಹುದ್ದೆ (ವೇತನ ಶ್ರೇಣಿ ರೂ. 11600-21000)ಗೆ ಈ ಮೂಲಕ ಹಿಂಬಡ್ತಿಗೊಳಿಸಲಾಗಿದೆ ಹಾಗೂ ಸದರಿಯವರ ಸೇವಾ ಜ್ಯೇಷ್ಠತೆಯನ್ನು ಬೆರಳಚ್ಚುಗಾರರ ಹುದ್ದೆಯಲ್ಲಿ ದಿನಾಂಕ 15-02-2013ರಿಂದ ಪರಿಗಣಿಸಲಾಗಿದೆ. ದಿನಾಂಕ 15-02-2016ರ ನಂತರ ಸದರಿಯವರ ಪದೋನ್ನತಿಯ ಪ್ರಕರಣವನ್ನು ಪುನರ್ ಪರಿಶೀಲಿಸಲಾಗುವುದು.

**ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ**
**ಭಾಷಾಂತರ ನಿರ್ದೇಶನಾಲಯ**
**ಬೆಂಗಳೂರು.**

**PR. 609**

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560001**

**ತಿದ್ದೋಲೆ**

**ಸಂಖ್ಯೆ: ಕರಾಆ : ಆಡಳಿತ : 51 : 2013, ದಿನಾಂಕ: 29–04–2015**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧಿಸೂಚನೆ ಸಂಖ್ಯೆ ಕರಾಆ/ಆಡಳಿತ/51/2013 ದಿನಾಂಕ: 23–04–2015ರ ಅಧಿಸೂಚನೆಯಲ್ಲಿ "ಹೈದ್ರಾಬಾದ್–ಕರ್ನಾಟಕದ ರಾಜ್ಯ ಮಟ್ಟದ ಸ್ಥಳೀಯ ವೃಂದವನ್ನು / ವೃಂದದಲ್ಲಿನ" ಎಂದು ಇರುವ ವಾಕ್ಯವನ್ನು "ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದವನ್ನು / ವೃಂದದಲ್ಲಿನ" ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಮಾನ್ಯ
ಅಧ್ಯಕ್ಷರ ಆದೇಶಾನುಸಾರ

**ಜಿ.ಎಲ್. ಲಕ್ಷ್ಮೀನಾರಾಯಣ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬಸವ ಭವನ, ಬೆಂಗಳೂರು–560 001

P.R. 517
S.C.10

**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 12 ಭಾನಿವಿ 2015, ಬೆಂಗಳೂರು, ದಿನಾಂಕ: 06–02–2015**

**ವಿಷಯ :** ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2015ರಲ್ಲಿರುವಂತೆ ಪ್ರಕಟಿಸುವ ಬಗ್ಗೆ

**ಉಲ್ಲೇಖ :** ಭಾಷಾಂತರ ನಿರ್ದೇಶಕರ ಪತ್ರ ಸಂಖ್ಯೆ: ಭಾನಿ 1/ ಆಡಳಿತ/ ಗ್ರೂಪ್ಎ/ಜ್ಯೇಪಟ್ಟಿ/2015, ದಿನಾಂಕ : 06/12–01–2015.

ಕರ್ನಾಟಕ ಸರ್ಕಾರಿ ನೌಕರರ (ಜ್ಯೇಷ್ಠತಾ) ನಿಯಮಗಳು, 1957ರ 10ನೇ ನಿಯಮದ (1)ನೇ ಉಪ–ನಿಯಮದನ್ವಯ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2015ರಲ್ಲಿರುವಂತೆ ಅನುಬಂಧದಲ್ಲಿ ಲಗತ್ತಿಸಿ ಪ್ರಕಟಿಸಿದೆ. ಸದರಿ ಜ್ಯೇಷ್ಠತಾ ಪಟ್ಟಿಯಿಂದ ಬಾಧಿತ ಅಭ್ಯರ್ಥಿಗಳಿಂದ ಆಕ್ಷೇಪಣೆ ಹಾಗೂ ಸಲಹೆಗಳು ಇದ್ದಲ್ಲಿ, ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ, ಕೊಠಡಿ ಸಂಖ್ಯೆ: 136, ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು ಈ ಅಧಿಸೂಚನೆಯು ರಾಜ್ಯಪತ್ರದಲ್ಲಿ ಪ್ರಕಟಿತವಾದ ದಿನಾಂಕದಿಂದ 15 ದಿನಗಳ ಕಾಲಾವಕಾಶ ನೀಡಲಾಗಿದೆ.

**ಅನುಬಂಧ**

**ದಿನಾಂಕ: 01–01–2015ರಲ್ಲಿ ಇರುವಂತೆ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಕರಡು ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಅಧಿಕಾರಿಯ ಹೆಸರು | ನೇರ ನೇಮಕಾತಿ/ ಮುಂಬಡ್ತಿ ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂದ | ನೇಮಕಾತಿಗೆ / ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| **ಗ್ರೂಪ್–ಎ** | | | | | | | |
| **ನಿರ್ದೇಶಕರು (ರೂ.40050–1050–45300–1200–52500–1350–56550)** | | | | | | | |
| 1 | ಖಾಲಿ ಹುದ್ದೆ | | | | | | |
| **ಉಪ ನಿರ್ದೇಶಕರು (ರೂ. 36300–900–3000–1050–45300–1200–52500–1350–53850)** | | | | | | | |
| 1 | ಐ.ಎಂ. ಕಂಬಳಿ | ಮುಂಬಡ್ತಿ | ಸಾಮಾನ್ಯ | 05.08.1958 | 14.06.1983 | 11.01.2012 | 11.01.2012 |
| 2 | ಜಿ. ಮಹದೇವ್ | ಮುಂಬಡ್ತಿ | ಸಾಮಾನ್ಯ | 17.05.1955 | 12.12.1983 | 06.11.2012 | 06.11.2012 |
| 3 | ಎಂ. ವೆಂಕಟೇಶ | ಮುಂಬಡ್ತಿ | ಪರಿಶಿಷ್ಟ ಜಾತಿ | 12.11.1968 | 25.01.1999 | 22.03.2014 | 22.03.2014 |

**ಸಹಾಯಕ ನಿರ್ದೇಶಕರು (ರೂ. 28100–700–28800–800–33200–900–39000–1050–45300–1200–50100)**

| | | | | | | | |
|---|---|---|---|---|---|---|---|
| 1 | ಎಂ. ನಾರಾಯಣಸ್ವಾಮಿ | ಮುಂಬಡ್ತಿ | ಪರಿಶಿಷ್ಟ ಪಂಗಡ | 01.06.1972 | 13.11.2003 | 27.06.2012 | 27.06.2012 |
| 2 | ಕೆ. ಉಮಾಲಕ್ಷ್ಮಿ | ಮುಂಬಡ್ತಿ | ಪರಿಶಿಷ್ಟ ಜಾತಿ | 09.07.1970 | 25.01.1999 | 27.09.2012 | 27.09.2012 |
| 3 | ಜಿ. ಗಂಗರಾಜು | ಮುಂಬಡ್ತಿ | ಸಾಮಾನ್ಯ | 20.07.1973 | 25.01.1999 | 25.04.2014 | 25.04.2014 |
| 4 | ಡಿ. ಸ್ಮಿತಾ | ಮುಂಬಡ್ತಿ | ಸಾಮಾನ್ಯ | 14.07.1974 | 25.01.1999 | 11.08.2014 | 11.08.2014 |
| 5 | ಭಕ್ತರಾಜಪಾಟೀಲ್ | ಮುಂಬಡ್ತಿ | ಸಾಮಾನ್ಯ | 08.08.1971 | 25.01.1999 | 11.08.2014 | 11.08.2014 |
| 6 | ರಂಗನಾಥ | ಮುಂಬಡ್ತಿ | ಸಾಮಾನ್ಯ | 07.06.1969 | 25.01.1999 | 11.08.2014 | 11.08.2014 |

**ಆಡಳಿತಾಧಿಕಾರಿ (ರೂ. 28100–700–28800–800–33200–900–39000–1050–45300–1200–50100)**

| | | | | | | | |
|---|---|---|---|---|---|---|---|
| 1 | ಖಾಲಿ ಹುದ್ದೆ | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಜಿ. ಶ್ಯಾಮಲ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

**P.R. 519**
**S.C.10**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES

### (KARNATAKA), BENGALURU.

**Present :** Sri Ritvik Pandey, IAS, Commissioner of Commercial Taxes (K).

**Sub :** KVAT Act, 2003 - issue of clarification on rate of tax applicable on PVC Cables & Wires namely Voltage 1100 volts from 1 sq. MM to 400 Sq.MM of Copper and Aluminium' - reg.

**Ref :** Application dated 06.04.2015 of M/s Cauvery Electricals, Bengaluru (TIN-29510098720)

**PREAMBLE :**

The applicant M/s Cauvery Electricals, No.237, Chikpet Main Road, Shantha veeraiah Lane, Bengaluru-53 (TIN-29510098720) has sought clarification on the rate of tax applicable on Copper and Aluminium PVC Cables & Wires from 1 sq. MM to 400 Sq.MM Voltage 1100 volts in the light of recent Notification – V vide No. FD 40 CSL 2015 dated 31-03-2015.

2. The matter is examined. As per Notification-V vide No.FD 40 CSL 2015 dated 31.03.2015, the following goods are liable to tax at 5.5% with effect from 01.4.2015, whose description is as under:

**"Industrial Cables namely High Voltage Cable, XLPE Cable,**

**Jelly Filled Cable, Optical Fibre Cable and PVC Cable".**

A "Wire" is a single conductor while "Cable" is a group of two or more conductors. One way to differentiate them is to remember that Wires are a component in Cables. A Wire is a single strand or a group of strands of electrically condusive material, usually aluminum or copper. A Cable, on the other hand consists of two or more insulated conductors or can be either bare or covered. The easiest way to distinguish between the two is that the Wire is usually visible, whereas a Cable is most usually insulated. The word "Wire" is not defined whereas "Cable" and "Voltage" are defined under the Indian Electricity Rules, 1956.

Rule 2(g):

"Cable" means a length of insulated single conductor (solid or stranded) or of two or more such conductors, each provided with its own insulation, which are laid up together. Such insulated conductors may or may not be provided with an over all mechanical protective covering.

"Rule 2(av):

"Voltage" means the difference of electric potential measured in volts between any two conductors or between any part of either conductor and the earth as measured by a suitable voltmeter and is said to be.-

"low" where the voltage does not exceed 250 volts under normal conditions subject, however, to the percentage variation allowed by these rules.

"medium" where the voltage does not exceed 650 volts under normal conditions subject, however, to the percentage variation allowed by these rules.

"high" where the voltage does not exceed 33,000 volts under normal conditions subject, however, to the percentage variation allowed by these rules."

Further, Section 2(2) of Central Electricity Authority (Furnishing of Statistics, Returns and Informations) Regulations, 2007 defines (Voltage) as under:

(2) "Voltage" means the difference of electrical potential measured in volts between any two conductors or between any part of either conductor and the earth as measured by a suitable voltmeter and is said to be -

(a) "high voltage" where the voltage exceeds 650 volts but does not exceed 33000 volts under normal conditions; and

(b) "extra high voltage" where the voltage exceeds 33000 volts under normal conditions.

3. There cannot be any dispute that the Indian Electricity Act and the Electricity Supply Act as well as the Rules and Regulations framed under these enactments would guide and regulate the technical aspects which traders and those dealing with these articles understand.

From the above, it is evident that Industrial Cables of voltage exceeding 650 volts and upto 33000 volts only are liable to lower rate of tax at 5.5%. In addition XLPE Cable, Jelly Filled Cable, Optical Fibre Cable and PVC Cable - all these cables without any voltage restriction are liable to lower rate. of 5.5% in terms of the above notification.

**ORDER No. CLR/CR-05/2015-16 DATED 23.04.2015**

In the circumstances, it is clarified as under:

| SL.No. | Commodity | Rate of tax |
|---|---|---|
| **1** | Industrial Cables namely High voltage cables i.e. cables for use of more than 650 volts and upto 33000 volts | 5.5% vide Notification- V No.FD 40 CSL 2015 dated 31.03.2015 |
| **2** | Industrial Cables namely XLPE Cable without any voltage restrictions | 5.5% vide Notification- V No.FD 40 CSL 2015 dated 31.03.2015 |
| **3** | Industrial Cables namely Jelly Filled Cable without any voltage restrictions | 5.5% vide Notification- V No.FD 40 CSL 2015 dated 31.03.2015 |
| **4** | Industrial Cables namely Optical Fibre Cable without any voltage restrictions | 5.5% vide Notification- V No.FD 40 CSL 2015 dated 31.03.2015 |
| **5** | Industrial Cables namely PVC Cable without any voltage restrictions | 5.5% vide Notification- V No.FD 40 CSL 2015 dated 31.03.2015 |
| **6** | Electrical Wires and Cables other than those mentioned above. | 14.5% under Section 4(1)(b) (iii) of KVAT Act, 2003 |

**P.R. 521**

**S.C. 25**

**RITVIK PANDEY**
Commissioner of Commercial Taxes
(Karnataka), Bengaluru.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ರಂಗವ್ವನಹಳ್ಳಿ ಕುರಿ ಸಾಕಾಣಿಕೆ ಮತ್ತು ಉಣ್ಣೆ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ನಿ, ಚಳ್ಳಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3)ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಸಮಾಪನೆ ಆದೇಶ ಸಂಖ್ಯೆ: ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್–97/2014–15, ದಿನಾಂಕ: 30–08–2014

2.ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ : ಸನಿ–30/ಸಮಾಪನೆ/ಸಿಆರ್–61/2014–15, ದಿನಾಂಕ : 27–03–2015.

**ಪ್ರಸ್ತಾವನೆ :–**

ಸಮಾಪನೆಯಲ್ಲಿರುವ ರಂಗವ್ವನಹಳ್ಳಿ ಕುರಿ ಸಾಕಾಣಿಕೆ ಮತ್ತು ಉಣ್ಣೆ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ನಿ, ಚಳ್ಳಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ಸಮಾಪನಾಧಿಕಾರಿಯಾಗಿ ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ. ನಂತರ ಸದರಿ ಸಂಘದ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆಂದು ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರು ತಿಳಿಸಿರುತ್ತಾರೆ ಹಾಗೂ ಸಂಘದ ಸದಸ್ಯರು ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಸಕ್ತಿ ಹೊಂದಿದ್ದು, ಸಂಘದ ಕಾರ್ಯವ್ಯಾಪ್ತಿಯು ಬಯಲು ಸೀಮೆ ಕಾರ್ಯವ್ಯಾಪ್ತಿಯದಾಗಿದ್ದು, ಕಾರ್ಯವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗದ ಹಾಗೂ ಅಲ್ಪಸಂಖ್ಯಾತ ಸದಸ್ಯರಿದ್ದು, ಇವರುಗಳು ಕುರಿ ಸಾಕಾಣಿಕೆಯಿಂದಲೇ ಜೀವನ ನಡೆಸುತ್ತಿದ್ದಾರೆ ಎಂದು ಸಂಘವನ್ನು ಪುನಃಶ್ಚೇತನಗೊಳಿಸಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ : 13–03–2015 ರಂದು ಸಹಾಯಕ ನಿರ್ದೇಶಕರು, ಕರ್ನಾಟಕ ಕುರಿ ಮತ್ತು ಉಣ್ಣೆ ನಿಗಮ ನಿ, ಚಿತ್ರದುರ್ಗ ಇವರು ಸಂಘದ ಕಾರ್ಯವ್ಯಾಪ್ತಿಯಲ್ಲಿ ಕುರಿ ಸಾಕಾಣಿಕೆ ಮತ್ತು ಕುರಿ ಉತ್ಪನ್ನಗಳ ಕಸುಬುಗಳಿಗೆ ಪೂರಕವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆ.

ಪ್ರಯುಕ್ತ, ಸಂಘವನ್ನು ಪುನಃಶ್ಚೇತನಗೊಳಿಸಲು ಹಾಗೂ 5 ವರ್ಷಗಳ ಕ್ರಿಯಾ ಯೋಜನೆ ತಯಾರಿಸಿ, ಕ್ರಿಯಾ ಯೋಜನೆಯನ್ವಯ ಕಾರ್ಯನಿರ್ವಹಿಸುವುದಾಗಿ ತೀರ್ಮಾನ ಕೈಗೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶ ನೀಡುವಂತೆ ವಿನಂತಿಸಿ ಉಲ್ಲೇಖ (2) ರನ್ವಯ ಚಿತ್ರದುರ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸದರಿ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಷರತ್ತು ವಿಧಿಸಿ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ : ಡಿಆರ್‌ಡಿ/ಸಮಾಪನೆ/ಸಿಆರ್–97/2015–16, ದಿನಾಂಕ : 13–04–2015**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959. ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಓ/39/ಸಿಎಲ್‌ಎಂ/2010, ಬೆಂಗಳೂರು ದಿನಾಂಕ: 17–02–2011 ಪ್ರಕಾರ ದತ್ತವಾಗಿರುವ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ರಂಗವ್ವನಹಳ್ಳಿ ಕುರಿ ಸಾಕಾಣಿಕೆ ಮತ್ತು ಉಣ್ಣೆ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ನಿ, ಚಳ್ಳಕೆರೆ ತಾಲ್ಲೂಕು ಇದನ್ನು ಉಲ್ಲೇಖ (1)ರ ಮೇರೆಗೆ ಆದೇಶಿಸಲಾದ ಪರಿಸಮಾಪನಾ ಆದೇಶವನ್ನು ರದ್ದುಪಡಿಸಿ ಈ ದಿನದಿಂದ ಸಂಘವನ್ನು ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಲಾಗಿದೆ.

**ಷರತ್ತುಗಳು:**

1. ಸಂಘಕ್ಕೆ ಪೂರ್ಣ ಅವಧಿ ಕಾರ್ಯದರ್ಶಿಯವರನ್ನು ನೇಮಕ ಮಾಡಿಕೊಂಡು ಸಂಘದ ವ್ಯವಹಾರವನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ಸಂಘದ ಉಪ ನಿಯಮಗಳನ್ವಯ ನಡೆಸಿಕೊಂಡು ಹೋಗತಕ್ಕದ್ದು.
2. ಸಂಘವು ಸಲ್ಲಿಸಿರುವ 5 ವರ್ಷದ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮವನ್ನು ರೂಪಿಸಿಕೊಂಡು ಸಂಘದ ಅಭಿವೃದ್ಧಿಗೆ ಕ್ರಮವಿಡುವುದು, ತಪ್ಪಿದಲ್ಲಿ ಸಂಘವನ್ನು ಪುನಃ ಸಮಾಪನೆಗೊಳಿಸಲಾಗುವುದು.
3. ಸಂಘದಲ್ಲಿ ಸದಸ್ಯರನ್ನು ಹೆಚ್ಚಿಸಿ ಷೇರು ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಕ್ರಮವಿಡುವುದು.
4. ಈ ಆದೇಶದ 7 ದಿವಸಗಳಲ್ಲಿ ಸಂಘದ ಚುನಾವಣೆ ನಡೆಸುವ ಬಗ್ಗೆ ಅರ್ಹ ಮತದಾರರ ಪಟ್ಟಿ ಮತ್ತು ಸುಸ್ತಿದಾರರ ಪಟ್ಟಿಯನ್ನು ಮತ್ತು ಚುನಾವಣೆ ಸಂಬಂಧ ಎಲ್ಲಾ ದಾಖಲೆಗಳನ್ನು ಸಿದ್ಧಪಡಿಸಿಕೊಂಡು ಚುನಾವಣೆ ಪ್ರಕ್ರಿಯೆ ಜರುಗಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಮುಖಾಂತರ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 13–04–2015 ರಂದು ಹೊರಡಿಸಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**P.R.522**
**S.C.10**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ನೇರ್ಲಗುಂಟೆ ಕುರಿ ಮತ್ತು ಉಣ್ಣೆ ಉತ್ಪಾದಕರ ಸಂಸ್ಕರಣಾ ಸಹಕಾರ ಸಂಘ ನಿ, ಚಳ್ಳಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3)ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಸಮಾಪನೆ ಆದೇಶ ಸಂಖ್ಯೆ: ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/75/2010–11, ದಿನಾಂಕ: 21–03–2011.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ : ಸನಿ–30/ಸಮಾಪನೆ/ಸಿಆರ್– /2014–15, ದಿನಾಂಕ : 30–03–2015.

**ಪ್ರಸ್ತಾವನೆ :–**

ಸಮಾಪನೆಯಲ್ಲಿರುವ ನೇರ್ಲಗುಂಟೆ ಕುರಿ ಮತ್ತು ಉಣ್ಣೆ ಉತ್ಪಾದಕರ ಸಂಸ್ಕರಣಾ ಸಹಕಾರ ಸಂಘ ನಿ, ಚಳ್ಳಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ಸಮಾಪನಾಧಿಕಾರಿಯಾಗಿ ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ. ನಂತರ ಸದರಿ ಸಂಘದ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆಂದು ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರು ತಿಳಿಸಿರುತ್ತಾರೆ ಹಾಗೂ ಸಂಘದ ಸದಸ್ಯರು ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಸಕ್ತಿ ಹೊಂದಿದ್ದು, ಸಂಘದ ಕಾರ್ಯವ್ಯಾಪ್ತಿಯು ಬಯಲು ಸೀಮೆ ಕಾರ್ಯವ್ಯಾಪ್ತಿಯದಾಗಿದ್ದು, ಕಾರ್ಯವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗದ ಹಾಗೂ ಅಲ್ಪಸಂಖ್ಯಾತ ಸದಸ್ಯರಿದ್ದು, ಇವರುಗಳು ಕುರಿ ಸಾಕಾಣಿಕೆಯಿಂದಲೇ ಜೀವನ ನಡೆಸುತ್ತಿದ್ದಾರೆ ಎಂದು ಸಂಘವನ್ನು ಪುನಃಶ್ಚೇತನಗೊಳಿಸಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ : 30–03–2015 ರಂದು ಸಹಾಯಕ ನಿರ್ದೇಶಕರು, ಕರ್ನಾಟಕ ಕುರಿ ಮತ್ತು ಉಣ್ಣೆ ನಿಗಮ ನಿ, ಚಿತ್ರದುರ್ಗ ಇವರು ಸಂಘದ ಕಾರ್ಯವ್ಯಾಪ್ತಿಯಲ್ಲಿ ಕುರಿ ಸಾಕಾಣಿಕೆ ಮತ್ತು ಕುರಿ ಉತ್ಪನ್ನಗಳ ಕಸುಬುಗಳಿಗೆ ಪೂರಕವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆ.

ಪ್ರಯುಕ್ತ, ಸಂಘವನ್ನು ಪುನಃಶ್ಚೇತನಗೊಳಿಸಲು ಹಾಗೂ 5 ವರ್ಷಗಳ ಕ್ರಿಯಾಯೋಜನೆ ತಯಾರಿಸಿ, ಕ್ರಿಯಾಯೋಜನೆಯನ್ವಯ ಕಾರ್ಯನಿರ್ವಹಿಸುವುದಾಗಿ ತೀರ್ಮಾನ ಕೈಗೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶ ನೀಡುವಂತೆ ವಿನಂತಿಸಿ ಉಲ್ಲೇಖ (2) ರನ್ವಯ ಚಿತ್ರದುರ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸದರಿ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಷರತ್ತು ವಿಧಿಸಿ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ : ಡಿಆರ್‌ಡಿ/ಸಮಾಪನೆ/ಸಿಆರ್–75/2015–16, ದಿನಾಂಕ : 17–04–2015**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959. ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ/39/ಸಿಎಲ್‌ಎಂ/2010, ಬೆಂಗಳೂರು ದಿನಾಂಕ: 17–02–2011 ಪ್ರಕಾರ ದತ್ತವಾಗಿರುವ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ನೇರ್ಲಗುಂಟೆ ಕುರಿ ಮತ್ತು ಉಣ್ಣೆ ಉತ್ಪಾದಕರ ಸಂಸ್ಕರಣಾ ಸಹಕಾರ ಸಂಘ ನಿ, ಚಳ್ಳಕೆರೆ ತಾಲ್ಲೂಕು ಇದನ್ನು ಉಲ್ಲೇಖ (1)ರ ಮೇರೆಗೆ ಆದೇಶಿಸಲಾದ ಪರಿಸಮಾಪನಾ ಆದೇಶವನ್ನು ರದ್ದುಪಡಿಸಿ ಈ ದಿನದಿಂದ ಸಂಘವನ್ನು ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಲಾಗಿದೆ.

**ಷರತ್ತುಗಳು:**

1 ಸಂಘಕ್ಕೆ ಪೂರ್ಣ ಅವಧಿ ಕಾರ್ಯದರ್ಶಿಯವರನ್ನು ನೇಮಕ ಮಾಡಿಕೊಂಡು ಸಂಘದ ವ್ಯವಹಾರವನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ಸಂಘದ ಉಪ ನಿಯಮಗಳನ್ವಯ ನಡೆಸಿಕೊಂಡು ಹೋಗತಕ್ಕದ್ದು.

2 ಸಂಘವು ಸಲ್ಲಿಸಿರುವ 5 ವರ್ಷದ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮವನ್ನು ರೂಪಿಸಿಕೊಂಡು ಸಂಘದ ಅಭಿವೃದ್ಧಿಗೆ ಕ್ರಮವಿಡುವುದು, ತಪ್ಪಿದಲ್ಲಿ ಸಂಘವನ್ನು ಪುನಃ ಸಮಾಪನೆಗೊಳಿಸಲಾಗುವುದು.

3 ಸಂಘದಲ್ಲಿ ಸದಸ್ಯರನ್ನು ಹೆಚ್ಚಿಸಿ ಷೇರು ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಕ್ರಮವಿಡುವುದು.

4 ಈ ಆದೇಶದ 7 ದಿವಸಗಳಲ್ಲಿ ಸಂಘದ ಚುನಾವಣೆ ನಡೆಸುವ ಬಗ್ಗೆ ಅರ್ಹ ಮತದಾರರ ಪಟ್ಟಿ ಮತ್ತು ಸುಸ್ತಿದಾರರ ಪಟ್ಟಿಯನ್ನು ಮತ್ತು ಚುನಾವಣೆ ಸಂಬಂಧ ಎಲ್ಲಾ ದಾಖಲೆಗಳನ್ನು ಸಿದ್ಧಪಡಿಸಿಕೊಂಡು ಚುನಾವಣೆ ಪ್ರಕ್ರಿಯೆ ಜರುಗಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಮುಖಾಂತರ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 17–04–2015 ರಂದು ಹೊರಡಿಸಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**P.R.523**
**S.C.10**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ಶ್ರೀ ರಂಗನಾಥಸ್ವಾಮಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಂಸ್ಕರಣಾ ಸಹಕಾರ ಸಂಘ ನಿ, ಸಿದ್ದೇಶ್ವರನದುರ್ಗ, ಚಳ್ಳಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3)ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಸಮಾಪನೆ ಆದೇಶ ಸಂಖ್ಯೆ: ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/23/2010-11, ದಿನಾಂಕ: 21-03-2011.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂಖ್ಯೆ : ಸನಿ-30/ಸಮಾಪನೆ/ಸಿಆರ್-12 /2014-15, ದಿನಾಂಕ : 08-04-2015.

**ಪ್ರಸ್ತಾವನೆ :-**

ಸಮಾಪನೆಯಲ್ಲಿರುವ ಶ್ರೀ ರಂಗನಾಥಸ್ವಾಮಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಂಸ್ಕರಣಾ ಸಹಕಾರ ಸಂಘ ನಿ, ಸಿದ್ದೇಶ್ವರನದುರ್ಗ, ಚಳ್ಳಕೆರೆ ತಾಲ್ಲೂಕು ಈ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ಸಮಾಪನಾಧಿಕಾರಿಯಾಗಿ ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ. ನಂತರ ಸದರಿ ಸಂಘದ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆಂದು ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ತಾಲ್ಲೂಕು ಇವರು ತಿಳಿಸಿರುತ್ತಾರೆ ಹಾಗೂ ಸಂಘದ ಸದಸ್ಯರು ಸಂಘವನ್ನು ಮುನ್ನಡೆಸಿಕೊಂಡು ಹೋಗಲು ಆಸಕ್ತಿ ಹೊಂದಿದ್ದು, ಸಂಘದ ಕಾರ್ಯವ್ಯಾಪ್ತಿಯು ಬಯಲು ಸೀಮೆ ಕಾರ್ಯವ್ಯಾಪ್ತಿಯದಾಗಿದ್ದು, ಕಾರ್ಯವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಹಿಂದುಳಿದ ವರ್ಗದ ಹಾಗೂ ಅಲ್ಪಸಂಖ್ಯಾತ ಸದಸ್ಯರಿದ್ದು, ಇವರುಗಳು ಕುರಿ ಸಾಕಾಣಿಕೆಯಿಂದಲೇ ಜೀವನ ನಡೆಸುತ್ತಿದ್ದಾರೆ ಎಂದು ಸಂಘವನ್ನು ಪುನಃಶ್ಚೇತನಗೊಳಿಸಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ : 27-03-2015 ರಂದು ಸಹಾಯಕ ನಿರ್ದೇಶಕರು, ಕರ್ನಾಟಕ ಕುರಿ ಮತ್ತು ಉಣ್ಣೆ ನಿಗಮ ನಿ, ಚಿತ್ರದುರ್ಗ ಇವರು ಸಂಘದ ಕಾರ್ಯವ್ಯಾಪ್ತಿಯಲ್ಲಿ ಕುರಿ ಸಾಕಾಣಿಕೆ ಮತ್ತು ಕುರಿ ಉತ್ಪನ್ನಗಳ ಕಸುಬುಗಳಿಗೆ ಪೂರಕವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿಕೊಂಡಿರುತ್ತಾರೆ.

ಪ್ರಯುಕ್ತ, ಸಂಘವನ್ನು ಪುನಃಶ್ಚೇತನಗೊಳಿಸಲು ಹಾಗೂ 5 ವರ್ಷಗಳ ಕ್ರಿಯಾಯೋಜನೆ ತಯಾರಿಸಿ, ಕ್ರಿಯಾಯೋಜನೆಯನ್ವಯ ಕಾರ್ಯನಿರ್ವಹಿಸುವುದಾಗಿ ತೀರ್ಮಾನ ಕೈಗೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶ ನೀಡುವಂತೆ ವಿನಂತಿಸಿ ಉಲ್ಲೇಖ (2) ರನ್ವಯ ಚಿತ್ರದುರ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸದರಿ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಷರತ್ತು ವಿಧಿಸಿ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ : ಡಿಆರ್‌ಡಿ/ಸಮಾಪನೆ/ಸಿಆರ್-23/2015-16, ದಿನಾಂಕ : 17-04-2015**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959. ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ/39/ಸಿಎಲ್‌ಎಂ/2010, ಬೆಂಗಳೂರು ದಿನಾಂಕ: 17-02-2011 ಪ್ರಕಾರ ದತ್ತವಾಗಿರುವ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ಶ್ರೀ ರಂಗನಾಥಸ್ವಾಮಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಂಸ್ಕರಣಾ ಸಹಕಾರ ಸಂಘ ನಿ, ಸಿದ್ದೇಶ್ವರನದುರ್ಗ, ಚಳ್ಳಕೆರೆ ತಾಲ್ಲೂಕು ಇದನ್ನು ಉಲ್ಲೇಖ (1)ರ ಮೇರೆಗೆ ಆದೇಶಿಸಲಾದ ಪರಿಸಮಾಪನಾ ಆದೇಶವನ್ನು ರದ್ದುಪಡಿಸಿ ಈ ದಿನದಿಂದ ಸಂಘವನ್ನು ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಲಾಗಿದೆ.

**ಷರತ್ತುಗಳು:**

1. ಸಂಘಕ್ಕೆ ಪೂರ್ಣ ಅವಧಿ ಕಾರ್ಯದರ್ಶಿಯವರನ್ನು ನೇಮಕ ಮಾಡಿಕೊಂಡು ಸಂಘದ ವ್ಯವಹಾರವನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ಸಂಘದ ಉಪ ನಿಯಮಗಳನ್ವಯ ನಡೆಸಿಕೊಂಡು ಹೋಗತಕ್ಕದ್ದು.
2. ಸಂಘವು ಸಲ್ಲಿಸಿರುವ 5 ವರ್ಷದ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮವನ್ನು ರೂಪಿಸಿಕೊಂಡು ಸಂಘದ ಅಭಿವೃದ್ಧಿಗೆ ಕ್ರಮವಿಡುವುದು, ತಪ್ಪಿದಲ್ಲಿ ಸಂಘವನ್ನು ಪುನಃ ಸಮಾಪನೆಗೊಳಿಸಲಾಗುವುದು.
3. ಸಂಘದಲ್ಲಿ ಸದಸ್ಯರನ್ನು ಹೆಚ್ಚಿಸಿ ಷೇರು ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಕ್ರಮವಿಡುವುದು.
4. ಈ ಆದೇಶದ 7 ದಿವಸಗಳಲ್ಲಿ ಸಂಘದ ಚುನಾವಣೆ ನಡೆಸುವ ಬಗ್ಗೆ ಅರ್ಹ ಮತದಾರರ ಪಟ್ಟಿ ಮತ್ತು ಸುಸ್ತಿದಾರರ ಪಟ್ಟಿಯನ್ನು ಮತ್ತು ಚುನಾವಣೆ ಸಂಬಂಧ ಎಲ್ಲಾ ದಾಖಲೆಗಳನ್ನು ಸಿದ್ಧಪಡಿಸಿಕೊಂಡು ಚುನಾವಣೆ ಪ್ರಕ್ರಿಯೆ ಜರುಗಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಮುಖಾಂತರ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ: 17-04-2015 ರಂದು ಹೊರಡಿಸಿರುತ್ತೇನೆ.

**P.R.524**
**S.C.10**

**ಸಹಕಾರ ಸಂಘಗಳ ಉಪ ನಿಬಂಧಕರು,**
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ನಮೂನೆ–27**

**ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 68(1) ಮತ್ತು ನಿಯಮ 94ರನ್ವಯ ಘೋಷಣೆ**

**ಸಂಖ್ಯೆ: ಆರ್‌ಡಿ 14 ಎಲ್‌ಜಿಎಂ 2015, ಬೆಂಗಳೂರು, ದಿನಾಂಕ 23ನೇ ಮಾರ್ಚ್, 2015.**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟ ಪಡಿಸಿದ ಸಾರ್ವಜನಿಕ ಸ್ವತ್ತಿನ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುತ್ತದೆ.

ಪ್ರಯುಕ್ತ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68ನೇ ಪ್ರಕರಣದ (1)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಸ್ವತ್ತಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಕ್ಕಿನ ಜೊತೆಗೆ ಸದರಿ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಅನ್ಯತಾ ಬಾಧಿತನಾಗುವ/ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊರಡಿಸಿದ ತೊಂಬತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಸರ್ಕಾರಕ್ಕೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಮುಕ್ತ ಆಕ್ಷೇಪಣೆಗಳನ್ನು ಮತ್ತು ಹಕ್ಕುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಸರ್ಕಾರದ ಹಂತದಲ್ಲಿ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಸರ್ಕಾರಿ ಹಳ್ಳ ಇರುವ ಗ್ರಾಮ | ಬಸ್ತಿಪುರ |
| ತಾಲ್ಲೂಕು | ಕೊಳ್ಳೇಗಾಲ |
| ಜಿಲ್ಲೆ | ಚಾಮರಾಜನಗರ |
| ಸರ್ಕಾರಿ ಹದ್ದು ಹಿಡಿದ ರಸ್ತೆ ಇತ್ಯಾದಿ ಭಾಗ ಅಥವಾ ಭಾಗಗಳ ಭಾಗದ ವರ್ಣನೆ ಮತ್ತು ವಿಸ್ತೀರ್ಣ | 'ಹಳ್ಳ' ಸರ್ವೆ ನಂ. 121/1 ರಲ್ಲಿ 1.69 ಎಕರೆ ಪೈಕಿ 1.00 ಎಕರೆ |
| **ಮೇರೆ** | |
| ಪೂರ್ವ | ಸರ್ವೆ ನಂ. 121/2 |
| ಪಶ್ಚಿಮ | ಸರ್ವೆ ನಂ. 119 |
| ಉತ್ತರ | ಸರ್ವೆ ನಂ. 121/1 |
| ದಕ್ಷಿಣ | ಸರ್ವೆ ನಂ. 120/2 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ ಮಂ–2)

PR: 526

S.C. 50

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ನಮೂನೆ–27**

**ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ 68(1) ಮತ್ತು ನಿಯಮ 94ರನ್ವಯ ಘೋಷಣೆ**

**ಸಂಖ್ಯೆ: ಆರ್‌ಡಿ 27 ಎಲ್‌ಜಿಎಂ 2015, ಬೆಂಗಳೂರು, ದಿನಾಂಕ 20ನೇ ಏಪ್ರಿಲ್, 2015.**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟ ಪಡಿಸಿದ ಸಾರ್ವಜನಿಕ ಸ್ವತ್ತಿನ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ 66/11 ಕೆ.ವಿ. ವಿದ್ಯುತ್ ಉಪ ಕೇಂದ್ರ ಸ್ಥಾಪಿಸಲು

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68ನೇ ಪ್ರಕರಣದ (1)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಸ್ವತ್ತಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳುತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಕ್ಕಿನ ಜೊತೆಗೆ ಸದರಿ ಸ್ವತ್ತಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಅನ್ಯತಾ ಬಾಧಿತನಾಗುವ/ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊರಡಿಸಿದ ತೊಂಬತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ನಷ್ಟ ಪರಿಹಾರಕ್ಕೆ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಸರ್ಕಾರಕ್ಕೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಮುಕ್ತ ಆಕ್ಷೇಪಣೆಗಳನ್ನು ಮತ್ತು ಹಕ್ಕುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಸರ್ಕಾರದ ಹಂತದಲ್ಲಿ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಸರ್ಕಾರಿ ಹಳ್ಳ ಇರುವ ಗ್ರಾಮ | ಕಲ್ಕುಣಿಕೆ |
| ತಾಲ್ಲೂಕು | ಹುಣಸೂರು |
| ಜಿಲ್ಲೆ | ಮೈಸೂರು |
| ಸರ್ಕಾರಿ ಹದ್ದು ಹಿಡಿದ ರಸ್ತೆ ಇತ್ಯಾದಿ ಭಾಗ ಅಥವಾ ಭಾಗಗಳ ಭಾಗದ ವರ್ಣನೆ ಮತ್ತು ವಿಸ್ತೀರ್ಣ | ಸರ್ವೆ ನಂ. 171, ಸರ್ಕಾರಿ 'ಬಿ' ಖರಾಬು 2.00 ಎಕರೆ |
| **ಮೇರೆ** | |
| ಪೂರ್ವ | ರಸ್ತೆ |
| ಪಶ್ಚಿಮ | ಟೊಬ್ಯಾಕೊ ಬೋರ್ಡ್ |
| ಉತ್ತರ | ರಸ್ತೆ |
| ದಕ್ಷಿಣ | ಸರ್ವೆ ನಂ. 171ರ ಉಳಿಕೆ ಜಮೀನು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ ಮಂ-2)

**PR: 527**
**S.C. 50**

## ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರ, ದಾವಣಗೆರೆ ಇವರ ಕಛೇರಿ ನಡಾವಳಿ

**ಉಪಸ್ಥಿತರು: ಹೆಚ್.ಜಿ.ತೆಂಬದ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ**

**ವಿಷಯ:** ವಾಹನ ಸಂಖ್ಯೆ: KA-18/A-3080(HGV)ರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:** 1. ಮಾಲೀಕರ ಅರ್ಜಿ ದಿನಾಂಕ: 17-04-2015.
2. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ: 20-04-2015.

**ಪ್ರಸ್ತಾವನೆ:**

ವಾಹನ ಸಂಖ್ಯೆ: KA-18/A-3080(HGV)ರ ಮಾಲೀಕರಾದ ಶ್ರೀ ಜಬೀವುಲ್ಲಾ ಬಿನ್ ಶಫೀವುಲ್ಲಾ, ಹೊಸ ಪಿಂಜರ್ ಗಲ್ಲಿ, ಚೌಕೀಪೇಟೆ, ದಾವಣಗೆರೆ, ಮೇಲ್ಕಂಡ ವಾಹನವು ದುಸ್ಥಿತಿಯಲ್ಲಿರುವುದಾಗಿ ತಿಳಿಸಿ ಸದರಿ ವಾಹನದ ನೋಂದಣಿ ರದ್ಧತಿಗೆ ದಿನಾಂಕ: 17-04-2015ರಂದು ಮನವಿ ಮಾಡಿರುತ್ತಾರೆ. ವಾಹನವು 1996 ರ ಮಾದರಿಯಾಗಿದ್ದು ರಸ್ತೆಯಲ್ಲಿ ಓಡಿಸಲು ಯೋಗ್ಯವಾಗಿರುವುದಿಲ್ಲವೆಂದು ತಿಳಿಸಿರುವುದರ ಮೂಲಕ ಮೇಲ್ಕಂಡ ವಾಹನದ ನೋಂದಣಿಯನ್ನು ರದ್ದುಪಡಿಸಬಹುದಾಗಿ ಮೋಟಾರು ವಾಹನ ನಿರೀಕ್ಷಕರು ದಿನಾಂಕ: 20-04-2015ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ, ವಾಹನ ಸಂಖ್ಯೆ: KA-18/A-3080(HGV)ರ ನೋಂದಣಿಯನ್ನು ರದ್ದುಪಡಿಸಲು ಆದೇಶಿಸಿದೆ.

**:ಆದೇಶ:**

**ಸಂ:ಪ್ರಾ.ಸಾ.ಅ.ನೋ.ವಿ-01/2015-16 KA-18/A-3080(HGV) ದಿನಾಂಕ: 22-04-2015**

ಹೆಚ್.ಜಿ.ತೆಂಬದ್ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ ಆದ ನಾನು ನನಗೆ 1988ರ ಕೇಂದ್ರ ಮೋಟಾರು ವಾಹನ ಕಾಯ್ದೆ 55(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಕಾರಣಗಳಿಂದಾಗಿ ಮೋ/ವಾ/ಸಂ: KA-18/A-3080(HGV)ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಹಾಗೂ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಪಡಿಸುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 01. | ಮೋಟಾರು ವಾಹನ ಸಂಖ್ಯೆ | KA-18/A-3080 |
| 02. | ವಾಹನದ ನೋಂದಣಿ ದಿನಾಂಕ | 02-12-1996 |
| 03. | ವಾಹನದ ತಯಾರಕನ ಹೆಸರು | Ashok Leyland |
| 04. | ವಾಹನದ ವರ್ಗ | HGV |

| | | |
|---|---|---|
| 05. | ವಾಹನ ತಯಾರಿಕೆ ವರ್ಷ | 1996 |
| 06. | ಚಾಸಿಸ್ ಸಂಖ್ಯೆ | QXE378382 |
| 07. | ಯಂತ್ರ ಸಂಖ್ಯೆ | QXE265763 |
| 08. | ತೆರಿಗೆ ಅವಧಿ | 30–04–2015 |
| 09. | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಜಬೀವುಲ್ಲಾ ಬಿನ್ ಶಫೀವುಲ್ಲಾ, ಹೊಸ ಪಿಂಜರ್ ಗಲ್ಲಿ, ಚೌಕೀಪೇಟೆ, ದಾವಣಗೆರೆ |

**ಹೆಚ್.ಜಿ. ತೆಂಬದ್,**

ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ,
ದಾವಣಗೆರೆ

**P.R. 528**

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರ, ದಾವಣಗೆರೆ ಇವರ ಕಛೇರಿ ನಡಾವಳಿ**

**ಉಪಸ್ಥಿತರು: ಹೆಚ್.ಜಿ.ತೆಂಬದ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ**

ವಿಷಯ: ವಾಹನ ಸಂಖ್ಯೆ: KA-14/A-3415(HGV)ರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ

ಉಲ್ಲೇಖ: 1. ಮಾಲೀಕರ ಅರ್ಜಿ ದಿನಾಂಕ: 20–04–2015.
2. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ: 22–04–2015.

ಪ್ರಸ್ತಾವನೆ:

ವಾಹನ ಸಂಖ್ಯೆ: KA-14/A-3415(HGV)ರ ಮಾಲೀಕರಾದ ಶ್ರೀ ಸಿ. ರೀಯಾಜ್ ಬಿನ್ ಚಮಾನ್ ಸಾಬ್, # 779/2, ಮದೀನ ಮಸೀದಿ ಗಲ್ಲಿ, ಆರ್.ಎಂ.ಸಿ.ರಸ್ತೆ, ದಾವಣಗೆರೆ, ಮೇಲ್ಕಂಡ ವಾಹನವು ದುಸ್ಥಿತಿಯಲ್ಲಿರುವುದಾಗಿ ತಿಳಿಸಿ ಸದರಿ ವಾಹನದ ನೋಂದಣಿ ರದ್ಧತಿಗೆ ದಿನಾಂಕ: 20–04–2015ರಂದು ಮನವಿ ಮಾಡಿರುತ್ತಾರೆ. ವಾಹನವು 1996ರ ಮಾದರಿಯಾಗಿದ್ದು ರಸ್ತೆಯಲ್ಲಿ ಓಡಿಸಲು ಯೋಗ್ಯವಾಗಿರುವುದಿಲ್ಲವೆಂದು ತಿಳಿಸಿರುವುದರ ಮೂಲಕ ಮೇಲ್ಕಂಡ ವಾಹನದ ನೋಂದಣಿಯನ್ನು ರದ್ದುಪಡಿಸಬಹುದಾಗಿ ಮೋಟಾರು ವಾಹನ ನಿರೀಕ್ಷಕರು ದಿನಾಂಕ: 22–04–2015ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ, ವಾಹನ ಸಂಖ್ಯೆ: KA-14/A-3415(HGV)ರ ನೋಂದಣಿಯನ್ನು ರದ್ದುಪಡಿಸಲು ಆದೇಶಿಸಿದೆ.

**:ಆದೇಶ:**

**ಸಂ:ಪ್ರಾ.ಸಾ.ಅ.ನೋ.ವಿ–01/2015–16 KA-14/A-3415(HGV)' ದಿನಾಂಕ: 23–04–2015**

ಹೆಚ್.ಜಿ.ತೆಂಬದ್ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ದಾವಣಗೆರೆ ಆದ ನಾನು ನನಗೆ 1988ರ ಕೇಂದ್ರ ಮೋಟಾರು ವಾಹನ ಕಾಯ್ದೆ 55(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಕಾರಣಗಳಿಂದಾಗಿ ಮೋ/ವಾ/ಸಂ: KA-14/A-3415(HGV)ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಹಾಗೂ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಪಡಿಸುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 01. | ಮೋಟಾರು ವಾಹನ ಸಂಖ್ಯೆ | KA-14/A-3415 |
| 02. | ವಾಹನದ ನೋಂದಣಿ ದಿನಾಂಕ | 19–09–1996 |
| 03. | ವಾಹನದ ತಯಾರಕನ ಹೆಸರು | Ashok Leyland |
| 04. | ವಾಹನದ ವರ್ಗ | HGV |
| 05. | ವಾಹನ ತಯಾರಿಕೆ ವರ್ಷ | 1996 |
| 06. | ಚಾಸಿಸ್ ಸಂಖ್ಯೆ | KXE370437 |
| 07. | ಯಂತ್ರ ಸಂಖ್ಯೆ | KXE256143 |
| 08. | ತೆರಿಗೆ ಅವಧಿ | 31–05–2015 |
| 09. | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಸಿ. ರೀಯಾಜ್ ಬಿನ್ ಚಮಾನ್ ಸಾಬ್, # 779/2, ಮದೀನ ಮಸೀದಿ ಗಲ್ಲಿ, ಆರ್.ಎಂ.ಸಿ.ರಸ್ತೆ, ದಾವಣಗೆರೆ. |

**ಹೆಚ್.ಜಿ. ತೆಂಬದ್,**

ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ,
ದಾವಣಗೆರೆ

**P.R. 529**

## OFFICE OF THE CITY CIVIL COURT, BENGALURU

**NOTIFICATION**

**No. ADM-I(E) 2044/2015, Dated : 16th June 2015**

Sri K. Nagaraju, Asst. Registrar, City Civil Court, Bengaluru is granted 6 days of earned leave for the period from 12.5.2015 to 17.5.2015, on personal ground.

Sri D. Parashiva Shetty, Asst. Registrar, City Civil Court, Bengaluru is placed in additional charge of Sri K. Nagaraju, Asst. Registrar, City Civil Court, Bengaluru, during the above leave period.

Sri K. Nagaraju, Asst. Registrar, City Civil Court, Bengaluru would have continued in the same post, but for proceedings on leave.

**PR. 649**

By Order of the Prl. City Civil & Sessions Judge, Bengaluru

Registrar

City Civil Court, Bengaluru

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ 27 ಎಸ್‌ಜೆವೈ 2014, ಬೆಂಗಳೂರು, ದಿನಾಂಕ: 01-06-2015**

**ವಿಷಯ :** ಸಾಮಾಜಿಕ, ಆರ್ಥಿಕ ಮತ್ತು ಜಾತಿ ಗಣತಿ-2011 (ಎಸ್‌ಇಸಿಸಿ-2011) ಅಂತಿಮ ಗಣತಿ ಪಟ್ಟಿ ಪ್ರಕಟಣೆ ಬಗ್ಗೆ.

ಉಲ್ಲೇಖ : 1) ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011 ದಿನಾಂಕ 30-01-2014.

2) ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011 (ಎ-8) ದಿನಾಂಕ 19-02-2014.

ರಾಜ್ಯ ಸರ್ಕಾರವು ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ -2011ರ ಸಂಬಂಧ ಉಲ್ಲೇಖ (1)ರಲ್ಲಿ ನಮೂದಿಸಿರುವ ಅಧಿಸೂಚನೆಯಂತೆ ರಾಮನಗರ ಜಿಲ್ಲೆಗೆ ಕರಡು ಮತ್ತು ಅಂತಿಮ ಪಟ್ಟಿ ಪ್ರಕಟಿಸಲು ವೇಳಾಪಟ್ಟಿ ನೀಡಲಾಗಿತ್ತು. ಆದರೆ ಸದರಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ-2011ರ ಪ್ರಕ್ರಿಯೆಯು ಪೂರ್ಣಗೊಂಡಿಲ್ಲದ ಕಾರಣ ಅಂತಿಮ ಪಟ್ಟಿ ಪ್ರಕಟಣೆಯ ದಿನಾಂಕವನ್ನು ಉಲ್ಲೇಖ (2)ರಂತೆ ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಗಿತ್ತು.

ಪ್ರಸ್ತುತ ಈ ಪ್ರಕ್ರಿಯೆಯು ರಾಮನಗರ ಜಿಲ್ಲೆಯಲ್ಲಿ ಪೂರ್ಣಗೊಂಡಿರುವುದರಿಂದ ದಿನಾಂಕ 03-06-2015 ರಂದು ಅಂತಿಮ ಗಣತಿ ಪಟ್ಟಿ ಪ್ರಕಟಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 648**
**SC. 10**

**ಎನ್. ಕೃಷ್ಣಪ್ಪ**

ನಿರ್ದೇಶಕರು (ಗ್ರಾ.ಮೂ.ಸೌ-2)

ರಾಜ್ಯದ ಎಸ್‌ಇಸಿಸಿ-2011 , ನೋಡಲ್ ಅಧಿಕಾರಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

## RURAL DEVELOPMENT AND PANCHAYAT RAJ DEPARTMENT

**NOTIFICATION**

**No. RDP 27 SJY 2014, Dated : 01-06-2015**

**Sub :** Socio, Economic & Caste Census 2011 (SECC- 2011) Publication of Final List - Reg.

**Ref :** 1. Notification No. RDP 32 SJY 2011 (A-8), dated 30.01.2014.

2. Notification No. RDP 32 SJY 2011 (A-8), dated 19.02.2014.

Government of Karnataka, Rural Development and Panchayat Raj Department had issued notification indicating the time line for publishing Draft and Final lists of Socio, Economic & Caste Census 2011 pertaining to Ramanagar district as per ref(l).

As per Ref (2) this process of publication of Final list was indefinitely postponed as the process was not completed.

Presently, SECC-2011 process has been completed in Ramanagar district. Hence sanction is accorded topublish the Final list of Ramanagar district on 03-06-2015.

By Order and in the name of the Governor of Karnataka

**N. KRISHNAPPA**

Director

Rural Infrastructure-2

State SECC -2011 Nodal Officer

Rural Development & Panchayat Raj Department

**PR. 648**
**SC. 10**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ:ಲೋಇ:40:ಸೇಸಕಿ:15 ಬೆಂಗಳೂರು ದಿನಾಂಕ: 02–05–2015**

ಲೋಕೋಪಯೋಗಿ ಇಲಾಖೆ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 **ದಿನಾಂಕ: 15–11–2010ರಲ್ಲಿ ದಿನಾಂಕ: 01–01–1980 ರಿಂದ 31–12–2004ರವರೆಗೆ** ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು **ದಿನಾಂಕ: 22–11–2010ರ** ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು **ದಿನಾಂಕ: 30–10–2014ರ** ಪತ್ರದಲ್ಲಿ ಶ್ರೀ ಸುಬ್ರಮಣ್ಯ, ಕಿರಿಯ ಇಂಜಿನಿಯರ್ ಎಂದು ಸಂಪೂರ್ಣ ತಾತ್ಕಾಲಿಕ ಆಧಾರದ ಮೇಲೆ ತಿಂಗಳ ಅವಧಿಗೆ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ಜಲಾನಯನ ಏತ ನೀರಾವರಿ ನಿಗಮ ನಿಯಮಿತರವರ ಆದೇಶದಂತೆ ಉಪ ವಿಭಾಗ, ಚಿಕ್ಕಮಗಳೂರು ಇಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ನಂತರ ಸರ್ಕಾರದ ಪತ್ರ **ಸಂಖ್ಯೆ: ನೀಇ:35:ಸನೀ–93 ದಿನಾಂಕ: 03–12–1994** ಮತ್ತು ಕರ್ನಾಟಕ ರಾಜ್ಯ ಪ್ರಕಟಣೆಯ **ಸಂಖ್ಯೆ:1010:ದಿನಾಂಕ: 03–12–1994 ಅಧಿಸೂಚನೆ–1ರ** ಪ್ರಕಾರ ನಿಗಮದ ನೌಕರರ ಸೇವೆಯನ್ನು ನೀರಾವರಿ ಇಲಾಖೆಗೆ ವಿಲೀನಗೊಳಿಸಲಾಗಿರುತ್ತದೆ. ತದನಂತರ ಸರ್ಕಾರದ ಆದೇಶ **ಸಂಖ್ಯೆ: ಜಸಂಇ:378:ಸೇಸಶಿ:2004 ದಿನಾಂಕ: 29–10–2004ರಂತೆ** ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆ ಹೊಂದಿ ದಿನಾಂಕ: **30–11–2004ರ** ಅಪರಾಹ್ನ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ: **15–11–2010ರಲ್ಲಿ** ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರನ್ನು ಸೇರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಇವರ ಶಿಫಾರಸ್ಸನ್ನು ಪರಿಶೀಲಿಸಿ, ಸರ್ಕಾರದ ಅಧಿಸೂಚನೆ **ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ** ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಸುಬ್ರಮಣ್ಯ, ಸಹಾಯಕ ಇಂಜಿನಿಯರ್, ಇವರ ಹೆಸರನ್ನು ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಿ ಈ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE.GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3871-A | - | SUBRAMANYA | | 20-July-1968 | 03-Dec-1994 | 01-Aug-2001 | CLIC-AB |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ; ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು 560 001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಎನ್.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ

ಇಲಾಖೆ (ಸೇವೆಗಳು–ಬಿ)

**P.R. 539**

**SC-50**

## ಆರ್ಥಿಕ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆಆಇ 38 ವಾತೆಸಿ 2012 ಬೆಂಗಳೂರು, ದಿನಾಂಕ: 06–04–2015.**

ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರ ವೃಂದದ ದಿನಾಂಕ: 22–02–1997 ರಿಂದ 14–06–2012 ರವರೆಗಿನ ಅವಧಿಯ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ ಸರ್ಕಾರದ ಅಧಿಸೂಚನೆ ಸಂಖ್ಯೆ ಆಇ 38 ವಾತೆಸಿ 2012 ದಿನಾಂಕ: 30–09–2014 ರ ಅನುಬಂಧ–3 ರ ಕ್ರಮ ಸಂಖ್ಯೆ 975 ರಲ್ಲಿ ಅಂಕಣ (2) ರಲ್ಲಿ ನಮೂದಾಗಿರುವ ಅಧಿಕಾರಿಯ ಹೆಸರು "ಶ್ರೀ.ಎನ್.ಎನ್.ಬುಲ್‌ಬುಲೆ" ಎಂಬುದರ ಬದಲಾಗಿ "ಶ್ರೀ.ಎಸ್.ಎ.ಬುಲ್‌ಬುಲೆ" ಎಂದು ದಿನಾಂಕ: 30–09–2014 ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಹಾಗೂ

ವಾಣಿಜ್ಯ ತೆರಿಗೆ ಇಲಾಖೆಯ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರ ಹುದ್ದೆಯಲ್ಲಿ ಸಕ್ರಮಾತಿ ಮಾಡಿ ಅಧಿಸೂಚನೆ ಸಂಖ್ಯೆ ಆಇ 284 ವಾತೆಸಿ 2012, ದಿನಾಂಕ: 29–09–2014 ರ ಕ್ರಮ ಸಂಖ್ಯೆ 35 ರ ಅಂಕಣ (2) ರಲ್ಲಿ ನಮೂದಾಗಿರುವ "ಶ್ರೀ.ಎನ್.ಎನ್.ಬುಲ್‌ಬುಲೆ" ಎಂಬುದರ ಬದಲಾಗಿ "ಶ್ರೀ.ಎಸ್.ಎ.ಬುಲ್‌ಬುಲೆ" ಎಂದು ದಿನಾಂಕ: 29–09–2014 ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ.ಅಳವಂಡಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ವಾ.ತೆ–2 & ಸಮನ್ವಯ)

**P.R. 568**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 141 ಎಲ್‌ಜಿಎ 2013 ಬೆಂಗಳೂರು, ದಿನಾಂಕ: 02–05–2015.**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

1964ರ ಕರ್ನಾಟಕ ಭೂ ಕಂದಾಯ ಅಧಿನಿಯಮದ ಕಲಂ 68ನೇ ಪ್ರಕರಣದ 5ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ದಿನಾಂಕ: 22–11–2012 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಎಲ್‌ಎನ್‌ಡಿ(1)ಪಿಡಿಆರ್/184/11–12(ಬಿ2)ಸಿ.ನಂ.62505 ದಿನಾಂಕ: 15–11–12ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ರಸ್ತೆಯ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ ಸಾರ್ವಜನಿಕ ರಸ್ತೆಯ ಭಾಗದಲ್ಲಿನ ಅಥವಾ ಅದರ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮ | ಮೂಡುಪೆರಾರು |
| ತಾಲ್ಲೂಕು | ಮಂಗಳೂರು |
| ಜಿಲ್ಲೆ | ದಕ್ಷಿಣ ಕನ್ನಡ |
| ರಸ್ತೆ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಪೊರಂಬೋಕು ರಸ್ತೆ (ಪಹಣಿ ಪತ್ರಿಕೆಯ ದಾಖಲೆಯಂತೆ) |
| ರಸ್ತೆಯ ಭಾಗದ ಸರ್ವೆ ನಂಬರ್ ಮತ್ತು ವಿಸ್ತೀರ್ಣ | ಸ.ನಂ.144/1 ರಲ್ಲಿ 0.10 ಎಕರೆ |
| ಮೇರೆಗಳು | |
| ಪೂರ್ವ | ಸ.ನಂ. 144/1(ಪಿ) |
| ಪಶ್ಚಿಮ | ಸ.ನಂ. 144/6, ಸ.ನಂ. 144/7, ಸ.ನಂ.144/9 |
| ಉತ್ತರ | ಸ.ನಂ. 144/1(ಪಿ) |
| ದಕ್ಷಿಣ | ಸ.ನಂ. 144/1 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ–2)

**P.R. 569**
**SC-20**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ಮೊಳಕಾಲ್ಮೂರು ಟೌನ್ ಮಿಲ್ಲತ್ ಅಲ್ಪಸಂಖ್ಯಾತರ ಪತ್ತಿನ ಸಹಕಾರ ಸಂಘ ನಿ, ಮೊಳಕಾಲ್ಮೂರು ತಾಲ್ಲೂಕು ಇದರ ನೋಂದಣಿ ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿ ಆದೇಶ ಸಂಖ್ಯೆ/ಡಿಆರ್‌ಡಿ/ಸಮಾಪನೆ/ಸಿಆರ್–140/2013–14, ದಿನಾಂಕ: 14–03–2014.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸನಿ/30/ರದ್ದತಿ/ಸಿಆರ್/6/2014–15, ದಿನಾಂಕ: 28–03–2015.

**ಪ್ರಸ್ತಾವನೆ:–**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಮಾಪನೆಯಲ್ಲಿರುವ ಮೊಳಕಾಲ್ಮೂರು ಟೌನ್ ಮಿಲ್ಲತ್ ಅಲ್ಪಸಂಖ್ಯಾತರ ಪತ್ತಿನ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಸನಿ–30/ಆರ್‌ಜಿಎನ್/30464/2000–01, ದಿನಾಂಕ: 18–12–2000 ರಂದು

ನೋಂದಣಿಯಾಗಿದ್ದು, ಸಂಘವು ಅನೇಕ ವರ್ಷಗಳಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಮೊಳಕಾಲ್ಮೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಯನ್ನಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 18–03–2015 ರಂದು ನಡೆಸಿರುವ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯ ಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರಿಸಿದಲ್ಲಿ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘದ ನೋಂದಣಿಯನ್ನು ರದ್ದು ಪಡಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ದಿನಾಂಕ: 18–03–2015 ರಂದು ನಡೆಸಿರುವ ಸಮಾಪನಾ ನಡವಳಿ ಸ್ವಯಂ ವೇದ್ಯವಾಗಿರುವದರಿಂದ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸಿನನ್ವಯ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

**ಕ್ರ.ಸಂ. ಡಿಆರ್‌ಡಿ/ಸಮಾಪನೆ/ರದ್ಧತಿ/ಸಿಆರ್–140/2014–2015 ದಿನಾಂಕ: 31–03–2015.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್‌ಎಂ/2010, ಬೆಂಗಳೂರು, ದಿನಾಂಕ: 17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ಮೊಳಕಾಲ್ಮೂರು ಟೌನ್ ಮಿಲ್ಲತ್ ಅಲ್ಪಸಂಖ್ಯಾತರ ಪತ್ತಿನ ಸಹಕಾರ ಸಂಘ ನಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಘದ ಸಂಖ್ಯೆ: ಸನಿ–30/ಆರ್‌ಜಿಎನ್/30464/2000–01, ದಿನಾಂಕ: 18–12–2000ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ. ಈ ದಿನದಿಂದ ಸಂಘವು ಆಸ್ತಿತ್ವವನ್ನು ಕಳೆದು ಕೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಎಲ್ಲಾ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರಿಗೆ ಒಪ್ಪಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31–03–2015 ರಂದು ನೀಡಿರುತ್ತೇನೆ.

**P.R. 570** ಸಹಕಾರ ಸಂಘಗಳ ಉಪ ನಿಬಂಧಕರು,
**SC-10** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ಅಶೋಕ ಸಿದ್ದಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಮೊಳಕಾಲ್ಮೂರು ತಾಲ್ಲೂಕು ಇದರ ನೋಂದಣಿ ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿ ಆದೇಶ ಸಂಖ್ಯೆ/ಡಿಆರ್‌ಡಿ/ಸಮಾಪನೆ/ಸಿಆರ್/2013–14, ದಿನಾಂಕ: 28–12–2013.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸನಿ/30/ರದ್ದತಿ/ಸಿಆರ್/7/2014–15, ದಿನಾಂಕ: 28–03–2015.

**ಪ್ರಸ್ತಾವನೆ:–**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಮಾಪನೆಯಲ್ಲಿರುವ ಅಶೋಕ ಸಿದ್ದಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಸನಿ–30/ಆರ್‌ಜಿಎನ್/34969/2004–05, ದಿನಾಂಕ: 28–09–2004 ರಂದು ನೋಂದಣಿಯಾಗಿದ್ದು, ಸಂಘವು ಅನೇಕ ವರ್ಷಗಳಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಮೊಳಕಾಲ್ಮೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಯನ್ನಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 13–02–2015 ರಂದು ನಡೆಸಿರುವ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯ ಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರೆಸಿದಲ್ಲಿ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘದ ನೋಂದಣಿಯನ್ನು ರದ್ದು ಪಡಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ದಿನಾಂಕ: 13–02–2015 ರಂದು ನಡೆಸಿರುವ ಸಮಾಪನಾ ನಡವಳಿ ಸ್ವಯಂ ವೇದ್ಯವಾಗಿರುವದರಿಂದ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸಿನನ್ವಯ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

**ಕ್ರ.ಸಂ. ಡಿಆರ್‌ಡಿ/ಸಮಾಪನೆ/ರದ್ಧತಿ/ಸಿಆರ್–78/2014–2015 ದಿನಾಂಕ: 31–03–2015.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್‌ಎಂ/2010, ಬೆಂಗಳೂರು, ದಿನಾಂಕ: 17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ಅಶೋಕ ಸಿದ್ದಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಘದ ಸಂಖ್ಯೆ: ಸನಿ–30/11/ಆರ್‌ಜಿಎನ್/34969/2004–05, ದಿನಾಂಕ: 28–09–2004ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ. ಈ ದಿನದಿಂದ ಸಂಘವು ಅಸ್ತಿತ್ವವನ್ನು ಕಳೆದು ಕೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಎಲ್ಲಾ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರಿಗೆ ಒಪ್ಪಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31–03–2015 ರಂದು ನೀಡಿರುತ್ತೇನೆ.

**P.R. 571** ಸಹಕಾರ ಸಂಘಗಳ ಉಪ ನಿಬಂಧಕರು,
**SC-10** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ**

**ವಿಷಯ :** ಸಮಾಪನೆಯಲ್ಲಿರುವ ಉಣ್ಣೆ ಕೈಮಗ್ಗ ಉತ್ಪಾದಕರ ನೇಕಾರರ ಮತ್ತು ಮಾರಾಟ ಸಹಕಾರ ಸಂಘ ನಿ, ನರೇನಹಾಳ್, ಚಿತ್ರದುರ್ಗ ತಾಲ್ಲೂಕು ಇದರ ನೋಂದಣಿ ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿ ಸಮಾಪನಾ ಆದೇಶ ಸಂಖ್ಯೆ/ಡಿಆರ್‌ಡಿ/ಸಮಾಪನೆ/ಸಿಆರ್/34/2014–15, ದಿನಾಂಕ: 26–06–2014.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸನಿ/30/ಸಮಾಪನೆ/ಸಿಆರ್/2014–15, ದಿನಾಂಕ: 29–04–2015.

**ಪ್ರಸ್ತಾವನೆ:–**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಮಾಪನೆಯಲ್ಲಿರುವ ಉಣ್ಣೆ ಕೈಮಗ್ಗ ಉತ್ಪಾದನಾ ನೇಕಾರರ ಮತ್ತು ಮಾರಾಟದ ಸಹಕಾರ ಸಂಘ ನಿ., ನರೇನಹಾಳ್, ಚಿತ್ರದುರ್ಗ ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಎಆರ್‌ಸಿ–30/716/ಆರ್‌ಜಿಎನ್/24169/1997–98, ದಿನಾಂಕ: 07–01–1998 ರಂದು ನೋಂದಣಿಯಾಗಿದ್ದು, ಸಂಘವು ಅನೇಕ ವರ್ಷಗಳಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಯನ್ನಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 10–04–2015 ರಂದು ನಡೆಸಿರುವ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯ ಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರೆಸಿದಲ್ಲಿ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘದ ನೋಂದಣಿಯನ್ನು ರದ್ದು ಪಡಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ದಿನಾಂಕ: 10–04–2015 ರಂದು ನಡೆಸಿರುವ ಸಮಾಪನಾ ನಡವಳಿ ಸ್ವಯಂ ವೇದ್ಯವಾಗಿರುವದರಿಂದ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸಿನನ್ವಯ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

**ಕ್ರ.ಸಂ. ಡಿಆರ್‌ಡಿ/ಸಮಾಪನೆ/ರದ್ಧತಿ/ಸಿಆರ್–34/2015–16 ದಿನಾಂಕ: 30–04–2015.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್‌ಎಂ/2010, ಬೆಂಗಳೂರು, ದಿನಾಂಕ: 17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಸಮಾಪನೆಯಲ್ಲಿರುವ ಉಣ್ಣೆ ಕೈಮಗ್ಗ ಉತ್ಪಾದನಾ ನೇಕಾರರ ಮತ್ತು ಮಾರಾಟದ ಸಹಕಾರ ಸಂಘ ನಿ., ನರೇನಹಾಳ್, ಚಿತ್ರದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಘದ ಸಂಖ್ಯೆ: ಎಆರ್‌ಸಿ–30/716/ಆರ್‌ಜಿಎನ್/24169/1997–98, ದಿನಾಂಕ: 07–01–1998 ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ. ಈ ದಿನದಿಂದ ಸಂಘವು ಅಸ್ತಿತ್ವವನ್ನು ಕಳೆದು ಕೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಎಲ್ಲಾ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರಿಗೆ ಒಪ್ಪಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 30–04–2015 ರಂದು ನೀಡಿರುತ್ತೇನೆ.

**P.R. 572** ಸಹಕಾರ ಸಂಘಗಳ ಉಪ ನಿಬಂಧಕರು,
**SC-10** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

## DIRECTORATE OF ECONOMICS AND STATISTICS, BENGALURU-1

### Consumer Price Index Numbers for Industrial Workers

ಸಂ:ಆಸಾಂನಿ/ಎಸ್.ಐ.ಪಿ/ಬೆಕಂಸೂ/19/2015 **Month : Februuary 2015**

**State : Karnataka** **Base : 1987-88=100** **Date:02-05-2015**

| Group/Sub-Group | Bellary | Bhadravathi | Davangere | Dandeli | Kalaburagi | Harihar | Hassan | Mandya | Mangaluru | Raichur | Tumukur |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| **FOOD:** | | | | | | | | | | | |
| Cereals & Cereals Products | 963 | 925 | 1101 | 812 | 959 | 967 | 912 | 1047 | 806 | 1115 | 973 |
| Pulses & Pulse Products | 722 | 872 | 842 | 913 | 784 | 817 | 851 | 827 | 862 | 802 | 806 |
| Oil & Fats | 468 | 411 | 458 | 403 | 421 | 440 | 401 | 499 | 441 | 409 | 433 |
| Meat Fish & Eggs | 941 | 1114 | 1155 | 1020 | 1185 | 1066 | 981 | 1078 | 728 | 1213 | 1124 |
| Milk & Milk Products | 757 | 708 | 775 | 879 | 764 | 784 | 759 | 797 | 684 | 776 | 766 |
| Condiments & Spices | 630 | 784 | 1042 | 945 | 623 | 668 | 922 | 863 | 741 | 793 | 800 |
| Vegetables & Fruits | 745 | 900 | 1057 | 950 | 636 | 828 | 977 | 977 | 844 | 602 | 1254 |
| Other Food | 626 | 948 | 899 | 924 | 722 | 643 | 783 | 759 | 825 | 666 | 652 |
| **FOOD GROUP INDEX** | **793** | **865** | **965** | **854** | **801** | **803** | **847** | **926** | **769** | **886** | **866** |
| Pan, Supari, Tobacco & Intoxicants | 871 | 1094 | 980 | 954 | 766 | 1051 | 805 | 864 | 618 | 853 | 1030 |
| Fuel & Light | 685 | 628 | 709 | 804 | 756 | 804 | 740 | 766 | 606 | 975 | 533 |
| Housing | 100 | 100 | 100 | 100 | 100 | 100 | 100 | 100 | 100 | 100 | 100 |
| Clothing, Bedding & Footwear | 367 | 575 | 511 | 519 | 404 | 466 | 646 | 749 | 363 | 730 | 235 |
| **Miscellaneous:** | | | | | | | | | | | |
| Medical Care | 844 | 966 | 741 | 550 | 433 | 421 | 754 | 743 | 465 | 543 | 378 |
| Education, Recreation & Amusement | 900 | 793 | 1241 | 547 | 1004 | 1148 | 924 | 641 | 1162 | 1585 | 1114 |
| Transport & Communication | 844 | 831 | 768 | 788 | 868 | 790 | 818 | 1114 | 920 | 777 | 749 |
| Personal Care & effects | 444 | 562 | 664 | 625 | 734 | 531 | 544 | 553 | 547 | 548 | 520 |
| Other | 662 | 573 | 713 | 907 | 508 | 512 | 552 | 750 | 423 | 706 | 470 |
| **Miscellaneous Group Index** | 688 | 697 | 805 | 676 | 705 | 662 | 685 | 688 | 682 | 769 | 609 |
| **GENERAL INDEX** | **658** | **708** | **775** | **720** | **649** | **665** | **718** | **771** | **644** | **769** | **596** |
| To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

ಜಂಟಿ ನಿರ್ದೇಶಕರು

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

ಕರ್ನಾಟಕ ಸರ್ಕಾರ, ಬೆಂಗಳೂರು.

**Government of India**

**Ministry of Labour**

**Labour Bureau**

**'Cleremont'Shimla-171004**

**NO. 112/1 (KTK) /2014 CPI Dated: 7th APRIL, 2015**

**CONSUMER PRICE INDEX NUMBERS FOR INDUSTRIAL WORKERS (BASE : 2001=100)**

**Month : February, 2015**

| Group/Sub-Group/Centre | BELAGAVI | BENGALURU | HUBBALLI DHARWAD | MERCARA | MYSURU |
|---|---|---|---|---|---|
| **FOOD :** | | | | | |
| (a) Cereals & Products | 282 | 293 | 268 | 268 | 290 |
| (b) Pulses and & Products | 300 | 287 | 291 | 271 | 262 |
| (c) Oils & Fats | 233 | 261 | 198 | 286 | 214 |
| (d) Meat, Fish & Eggs | 370 | 340 | 349 | 315 | 336 |
| (e) Milk & Products | 314 | 273 | 252 | 266 | 290 |
| (f) Condiments & Spices | 252 | 302 | 290 | 276 | 311 |
| (g) Vegetables & Fruits | 356 | 294 | 324 | 318 | 297 |
| (h) Other Food | 273 | 299 | 274 | 277 | 276 |
| **FOOD GROUP** | 293 | 295 | 276 | 283 | 287 |
| Pan, Supari, Tobacco & Intoxicants | 264 | 272 | 295 | 237 | 283 |
| Fuel & Light | 215 | 186 | 210 | 357 | 209 |
| Housing index | 247 | 234 | 372 | 102 | 285 |
| Clothing, Bedding & Footwear | 170 | 160 | 173 | 199 | 176 |
| Miscellaneous | | | | | |
| (a) Medical care | 205 | 255 | 217 | 227 | 192 |
| (b) Education, Recreation and Amusement | 168 | 182 | 184 | 334 | 145 |
| (c) Transport and Communication | 317 | 337 | 323 | 322 | 261 |
| (d) Personal Care & Effects | 226 | 264 | 255 | 246 | 237 |
| (e) Others | 229 | 231 | 238 | 215 | 288 |
| Miscellaneous Group | 227 | 262 | 244 | 274 | 217 |
| **GENERAL INDEX** | 261 | 260 | 273 | 261 | 259 |

ECONOMIC OFFICER

ಜಂಟಿ ನಿರ್ದೇಶಕರು
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ
ಕರ್ನಾಟಕ ಸರ್ಕಾರ, ಬೆಂಗಳೂರು.

**P.R. 534**
**SC 05**

## DIRECTORATE OF ECONOMICS AND STATISTICS, BENGALURU-1

### Consumer Price Index Numbers for Industrial Workers

**No.DES:SIP:PWX: 16:2015** **Month : Year: March 2015**

**State : Karnataka** **Base : 1987-88=100** **Date: 16-05-2015**

| Group/Sub-Group | Bellary | Bhadravathi | Davangere | Dandeli | Kalaburagi | Harihar | Hassan | Mandya | Mangaluru | Raichur | Tumkur |
|---|---|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| **FOOD:** | | | | | | | | | | | |
| Cereals & Cereals Products | 969 | 925 | 1081 | 812 | 953 | 958 | 908 | 1057 | 806 | 1117 | 977 |
| Pulses & Pulse Products | 729 | 906 | 872 | 939 | 804 | 830 | 870 | 842 | 869 | 808 | 824 |
| Oil & Fats | 468 | 416 | 450 | 403 | 425 | 442 | 404 | 497 | 441 | 412 | 432 |
| Meat Fish & Eggs | 941 | 1114 | 1180 | 1020 | 1202 | 1074 | 982 | 1081 | 729 | 1213 | 1124 |
| Milk & Milk Products | 757 | 708 | 775 | 879 | 764 | 797 | 759 | 797 | 684 | 776 | 770 |
| Condiments & Spices | 636 | 785 | 1066 | 956 | 634 | 685 | 950 | 860 | 737 | 792 | 802 |
| Vegetables & Fruits | 738 | 890 | 1009 | 928 | 629 | 858 | 956 | 944 | 839 | 615 | 1234 |
| Other Food | 626 | 955 | 903 | 920 | 712 | 643 | 777 | 744 | 843 | 657 | 660 |
| **FOOD GROUP INDEX** | **795** | **869** | **960** | **854** | **801** | **807** | **847** | **928** | **773** | **887** | **868** |
| Pan, Supari, Tobacco & Intoxicants | 871 | 1094 | 1044 | 950 | 777 | 1047 | 811 | 864 | 618 | 853 | 1037 |
| Fuel & Light | 685 | 628 | 731 | 804 | 777 | 804 | 748 | 766 | 606 | 975 | 535 |
| Housing | 100 | 100 | 100 | 100 | 100 | 100 | 100 | 100 | 100 | 100 | 100 |
| Clothing, Bedding & Footwear | 367 | 575 | 509 | 519 | 404 | 462 | 647 | 749 | 365 | 730 | 235 |
| **Miscellaneous:** | | | | | | | | | | | |
| Medical Care | 876 | 966 | 741 | 550 | 430 | 421 | 758 | 743 | 465 | 557 | 378 |
| Education, Recreation & Amusement | 900 | 793 | 1239 | 547 | 1004 | 1148 | 942 | 641 | 1162 | 1585 | 1114 |
| Transport & Communication | 844 | 831 | 770 | 788 | 868 | 792 | 818 | 1114 | 920 | 777 | 763 |
| Personal Care & effects | 444 | 563 | 658 | 625 | 739 | 518 | 548 | 555 | 547 | 550 | 525 |
| Other | 662 | 573 | 713 | 920 | 508 | 514 | 553 | 750 | 423 | 706 | 470 |
| **Miscellaneous Group Index** | 694 | 698 | 803 | 680 | 706 | 660 | 691 | 689 | 682 | 771 | 612 |
| **GENERAL INDEX** | **660** | **709** | **776** | **721** | **651** | **667** | **720** | **772** | **646** | **770** | **598** |
| To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

ಜಂಟಿ ನಿರ್ದೇಶಕರು
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ
ಕರ್ನಾಟಕ ಸರ್ಕಾರ, ಬೆಂಗಳೂರು.

**Government of India**
**Ministry of Labour**

**Labour Bureau**
**'Cleremont'Shimla-171004**

**NO. 112/1 (KTK) /2014 CPI Dated: 6th May, 2015**

**Consumer Price Index Numbers for Industrial Workers (Base : 2001=100)**

**Month : March, 2015**

| Group/Sub-Group/Centre | BELAGAVI | BENGALURU | HUBBALLI DHARWAD | MERCARA | MYSURU |
|---|---|---|---|---|---|
| **FOOD :** | | | | | |
| (a) Cereals & Products | 269 | 296 | 265 | 263 | 291 |
| (b) Pulses and & Products | 303 | 299 | 303 | 274 | 277 |
| (c) Oils & Fats | 224 | 255 | 197 | 287 | 216 |
| (d) Meat, Fish & Eggs | 373 | 332 | 371 | 316 | 341 |
| (e) Milk & Products | 314 | 273 | 252 | 266 | 286 |
| (f) Condiments & Spices | 249 | 298 | 293 | 278 | 312 |
| (g) Vegetables & Fruits | 322 | 272 | 316 | 319 | 296 |
| (h) Other Food | 272 | 300 | 273 | 277 | 287 |
| **FOOD GROUP** | 286 | 292 | 277 | 282 | 291 |
| Pan, Supari, Tobacco & Intoxicants | 263 | 272 | 297 | 239 | 324 |
| Fuel & Light | 215 | 186 | 210 | 352 | 210 |
| Housing index | 247 | 234 | 372 | 102 | 285 |
| Clothing, Bedding & Footwear | 169 | 160 | 172 | 199 | 176 |
| Miscellaneous | | | | | |
| (a) Medical care | 207 | 255 | 220 | 227 | 198 |
| (b) Education, Recreation and Amusement | 168 | 182 | 186 | 334 | 146 |
| (c) Transport and Communication | 318 | 339 | 332 | 322 | 263 |
| (d) Personal Care & Effects | 228 | 246 | 255 | 247 | 242 |
| (e) Others | 229 | 227 | 238 | 215 | 296 |
| Miscellaneous Group | 228 | 259 | 247 | 274 | 220 |
| **GENERAL INDEX** | 257 | 258 | 274 | 260 | 262 |

**L.R. CHAUHAN**

ECONOMIC OFFICER

**P.R.552**
**SC 05**

ಜಂಟಿ ನಿರ್ದೇಶಕರು
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ
ಕರ್ನಾಟಕ ಸರ್ಕಾರ, ಬೆಂಗಳೂರು.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 35 ಭೂದಾಸೇ(1) 2014. ಬೆಂಗಳೂರು, ದಿನಾಂಕ: 05-05-2015**

**ವಿಷಯ :** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಜಂಟಿ ನಿರ್ದೇಶಕರು ವೃಂದದ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01-01-2014 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** 1) ಸಮಸಂಖ್ಯೆಯ ದಿನಾಂಕ: 09-12-2014 ರ ಅಧಿಸೂಚನೆ.

